ಮಂ ನೋಹರ

# ಎರಡು ಧ್ರುವ

## ಭಾಗ ೨



ಅನುವಾದಕರು :—

ವ್ಹಿ. ಎಂ. ಇನಾಮದಾರ

ಬಿ. ಎ.

ಡಿಶೆಂಬರ ೧೯೩೭

ಬೆಲೆ ೧—೦—೦

# ನಮ್ಮ ಮಾತು

'ಎರಡು ಧ್ರುವ' ಕಾದಂಬರಿಯನ್ನು ... ಪ್ರಕಟಿಸಲಾಗಿದೆ. ಈ ಎರಡು ಭಾಗಗಳು ಕೂಡಿ ... ಭಾಷಾಂತರವು ಪೂರ್ಣಗೊಂಡಿತೆಂದು ತಿಳಿಯಬೇಕು.

ಹೊಸಗನ್ನಡಕ್ಕೆ ಸ್ವತಂತ್ರ ಕೃತಿಗಳಷ್ಟೇ ಒಳ್ಳೆಯ ಭಾಷಾಂತರ ಗ್ರಂಥಗಳು ಹೇರಳವಾಗಿ ಬೇಕು. ಅವು ಯಾವ ಭಾಷೆಯವೇ ಇರಲಿ ಕನ್ನಡಕ್ಕೆ ತೊಡವುಗಳಾಗುತ್ತವೆ, ಕನ್ನಡಿಗನ ಜೀವನ ಪರಿಚಯವನ್ನು ವಿಶಾಲಗೊಳಿಸುತ್ತವೆ. ಈ ಶ್ರದ್ಧೆಯಿಂದ ನಾವು ನಮ್ಮ ಮಾಲೆಯಲ್ಲಿ ಆಗಾಗ ಭಾಷಾಂತರಗಳನ್ನು ಪೋಣಿಸುತ್ತ ಬಂದಿದ್ದೇವೆ. ಆದರೆ ಭಾಷಾಂತರ ಕಾರ್ಯವು ಸಾಮಾನ್ಯವಾದುದಲ್ಲ. ಒಂದು ಭಾಷೆಯ ಜೀವಾಳವನ್ನು ಇನ್ನೊಂದು ಭಾಷೆಯ ಜೀವಾಳಕ್ಕೆ ಪರಿವರ್ತಿಸುವ ಕೆಲಸವು ಲೇಖನ ಕಲೆಯಲ್ಲಿ ಎಂಥ ನುರಿತವನಿಗೂ ಶ್ರಮಸಾಧ್ಯವಾದುದು. ಅದರಲ್ಲಿ ಮರಾಠಿ ಗ್ರಂಥವನ್ನು ಕನ್ನಡಿಸುವಾಗ ಅದೆಷ್ಟೋ ಎಡರುಗಳು ಇದಿರು ನಿಲ್ಲುವವು. ಹೀಗಿದ್ದರೂ ಕನ್ನಡದ ಮೇಲಿನ ತಮ್ಮ ಪ್ರೇಮದಿಂದ ಶ್ರೀ. ಇನಾಂದಾರರು ಅತ್ಯಂತ ಶ್ರಮ ವಹಿಸಿ ಈ ಭಾಷಾಂತರವನ್ನು ಬರೆದು ನಮ್ಮ ಮಾಲೆಗೆ ನೀಡಿರುವರು. ಮಾತಿನ ಹಾಗೂ ಬರೆವಣಿಗೆಯ ಶೈಲಿಗಳ ಸಮತೂಕವೊಂದನ್ನು ಸಾಧಿಸಬೇಕೆಂದು ಅವರು ಮೊದಲಿನಿಂದ ಕೊನೆವರೆಗೆ ಈ ತಮ್ಮ ಪ್ರಥಮ ಸಾಹಸದಲ್ಲಿ ಮಾಡಿದ ಪ್ರಯತ್ನವು ನಮ್ಮ ವಾಚಕರ ಮೆಚ್ಚುಗೆಯನ್ನು ಪಡೆಯುವದೆಂದು ನಾವು ನಂಬಿದ್ದೇವೆ. ಮೂಲಗ್ರಂಥದ ಸ್ವಾರಸ್ಯವು ತಿಳಿಯಾಗಿ ಮನದಟ್ಟಾದರೆ ಭಾಷಾಂತರಕಾರರೊಡನೆ ನಾವೂ ಕೃತಾರ್ಥರು. ಅಲ್ಲದೆ ಈ ಗ್ರಂಥದ ಸಂಸ್ಕರಣ ಕಾರ್ಯದಲ್ಲಿ ತುಂಬಾ ನೆರವಾದ ಪ್ರೊ. ಜೋಗ ಅವರಿಗೂ ನಮ್ಮ ಸಂಪಾದಕೀಯ ಸಲಹೆಗಾರರಾದ ಪ್ರೊ. ಮುಂಗಳಿಯವರಿಗೂ ನಾವು ಕೃತಜ್ಞರಾಗಿದ್ದೇವೆ.

**ಸಂಪಾದಕರು**

· ಕಲೆ ಮತ್ತು ಜೀವನ, ಬಿಳಿಯಂಗಿಯವರು ಮತ್ತು ಕೂಲಿಕಾರರು, ಭೋಗ ಮತ್ತು ತ್ಯಾಗ. ವತ್ಸಲೆಗೆ ಎಲ್ಲೆಲ್ಲಿಯೂ ಧ್ರುವಗಳು ಜೋಡು ಜೋಡಾಗಿಯೇ ಕಂಡವು. ಧ್ರುವಗಳು ಎರಡೆಂಬುದೇ ನಿಜ! ಆದರೆ ಅವುಗಳ ನಡುವಿನ ಭಯಂಕರ ಅಂತರವೆಷ್ಟು? ಈ ಅಂತರದಿಂದಲೇ ಜಗತ್ತಿನಲ್ಲಿಯ ಎಲ್ಲ ದುಃಖಗಳು ಉದ್ಭವಿಸಿವೆ. ಈ ಅಂತರವು ಕಡಿಮೆ ಹೇಗಾಗಬೇಕು? ಎರಡು ಧ್ರುವಗಳು ಎಂದಾದರೂ ಒಂದಾಗಬಹುದೆ?' ಕಾದಂಬರಿಯಲ್ಲಿ ವತ್ಸಲೆಯು ಕಂಡ ಎರಡು ಧ್ರುವಗಳ ನಡುವಿನ ಅಂತರವು ಜೀವನದಲ್ಲಿಯ ಪ್ರತಿಯೊಬ್ಬ ವ್ಯಕ್ತಿಗೂ ಕಾಣಬಹುದಾದದ್ದು. ಅವಳೆದುರಿನಲ್ಲಿಯ ಪ್ರಶ್ನೆಯು ಪ್ರತಿಯೊಂದು ಸಾತ್ವಿಕ ಹೃದಯವನ್ನು ತಲ್ಲಣಿಸುವಂತಹದು. ಜೀವನದಲ್ಲಿ ದುಃಖ ದೈನ್ಯಗಳಿಗೆ ಮೂಲಕಾರಣವೆಂದರೆ ಜೀವನವನ್ನು ಸಹೃದಯತೆಯಿಂದ ನೋಡದೆ ಇರುವಿಕೆಯು. ತನ್ನ ಪತಿಯ ಡಾಂಭಿಕತೆಯ ಮೂಲಕ ಅನಂತ ದುಃಖಗಳಿಗೀಡಾದ ವತ್ಸಲೆಗೆ ಮಾನವ ಜೀವನದ ಎರಡು ತುದಿಗಳ ನಡುವಿನ ಅಂತರವು ಎಂದಿಗೂ ಒಂದಾಗಲಾರದಷ್ಟು ಭಯಂಕರವಾಗಿ ಕಂಡರೂ, ಅವಳು ತಾನಾಗಿಯೇ ತನ್ನ ಪತಿಯ ಅಯೋಗ್ಯತೆಯನ್ನು ಅರಿತು, ಕಷ್ಟ ನಿಷ್ಠುರಗಳ ನೆಲೆವೀಡಾದ ಕೆಳಗಿನ ವರ್ಗದ ಕೂಲಿಕಾರರಲ್ಲಿ ಕೂಡಿಕೊಂಡು, ಅವರ ದುಃಖದ ಆಳವನ್ನು ಕಂಡು ಹಿಡಿದು, ಅವರ ಜೀವನದಲ್ಲಿಯೇ ಸಮರಸಳಾಗಿ ಅವರಾದರೂ ಸುಖಿಗಳಾಗುವಂತೆ ಅವರನ್ನು ಮೇಲಕ್ಕೆಳೆಯುವದರಲ್ಲಿಯೇ ತನ್ನ ಸ್ವರ್ಗವೆಂದು ಮನಗಂಡು, ಕೂಡಲಾರದಂತೆ ಕಾಣುವ ಕೊನೆಗಳನ್ನು ಕೂಡಿಸುವ ಮಾರ್ಗವನ್ನು ಪ್ರತ್ಯಕ್ಷ ಕೃತಿಯಿಂದ ತೋರಿಸುವಳು. ವತ್ಸಲೆಯು ಅಸಾಮಾನ್ಯ ವ್ಯಕ್ತಿಯು. ಅವಳ ಕರ್ತವ್ಯಕಠೋರತೆಯು ನಡೆದುಬಂದ ನೀತಿಯನ್ನು

ಲೆಕ್ಕಿಸದೆ, ಪರದುಃಖ
ವನ್ನು ಕೂಡ ಕಚ್ಚಿ ಕಸಿದುಕೊ
ಸ್ವಾರ್ಥಮಯವಾದ ಸುಖಲೋಲುಪತೆ
ಸ್ವರೂಪವನ್ನರುಹುವಂತಹದಾಗಿದೆ. ಇದೀ ಕಾದಂಬರಿಯ
ಸಮಸ್ಯೆಗೆ ಪತ್ನಿಲೆಯ ಕೃತಕಾರ್ಯತೆಯೇ ಸಮರ್ಪಕವಾದ ಉತ್ತ. ಸುಖಸಂಪಾದನೆಯು ಜೀವದ ಧ್ಯೇಯಗಳಲ್ಲಿ ಹಿರಿದೊಂದಾಗಿದ್ದರೂ ಆ ಸಂಪಾದನೆಯಲ್ಲಿ ಪರರ ಸುಖಕ್ಕೆ ವ್ಯತ್ಯಯ ಬರದಂತೆ ಸಾಧನಗಳನ್ನು ಕಲ್ಪಿಸಿಕೊಂಡು ತನ್ನ ಕರ್ತವ್ಯವನ್ನು ಮರೆಯದೆ, ತನಗೆ ಸಿಕ್ಕ ಸುಖದ ಕೆಲವಂಶವು ತನ್ನುಳಿದ ಇತರರಿಗಾದರೂ ದೊರೆತು ಅವರೂ ಸುಖಿಗಳಾಗ ಲೆಂಬ ಉದಾರಬುದ್ಧಿಯಿಂದ ಜೀವಿಸುವದೇ ನಿಜವಾದ ಜೀವನ. ಇಲ್ಲ ವಾದರೆ ಕಲೆಯ ಸೋಗನ್ನು ಹೊತ್ತು ಸೀತ ರಮಾಕಾಂತನ ಕಾಮುಕ ಸ್ವಾರ್ಥ, ಕಪಟ ದಾರಣದ ಹಿಂದೆ ಒಯುಗಿಸಬಾಳಲಾರದ ದಾದಾನ ನೀಚತನ, ಇಂಥವುಗಳೇ ಜೀವನದಲ್ಲಿಯ ಸೌಂದರ್ಯವನ್ನು ಇಲ್ಲದಂತೆ ಮಾಡಿ ಸುಖವನ್ನು ಮಣ್ಣುಗೂಡಿಸುವವು. 'ಎರಡು ಧ್ರುವವು ಆಧು ನಿಕ ಸಾಮಾಜಿಕ ಜೀವನದಲ್ಲಿಯ ವಿಷಮತೆಗಳ ಅತ್ಯುಗ್ರವಾದ ಚಿತ್ರ. ಮನನೀಯವಾದ ವಿಚಾರವನ್ನೊಳಗೊಂಡ ಕಥೆಗೆ, ಸರಸವಾದ ಕಲೆಯ ಆವರಣ ದೊರೆತಿದೆ. ಇದರಲ್ಲಿಯ (art & ideology) ಕಲೆ ಮತ್ತು ವಿಚಾರಪರಿಪಾಕಗಳ ಸರಸಸಮ್ಮಿಲನದ ಮೂಲಕವಾಗಿಯೇ ಇದನ್ನು ಕನ್ನಡಿಸಿ ಕರ್ನಾಟಕ ಕಾಂಬರೀ ವಾಙ್ಮಯಕ್ಕೆ ಕೈಲಾದಮಟ್ಟಿಗೆ ಸೇವೆ ಸಲ್ಲಿಸಬೇಕೆಂಬ ಬುದ್ಧಿ ನನ್ನಲ್ಲಿ ಹುಟ್ಟಿದ್ದು. ನಮ್ಮಲ್ಲಿಯ ಕಾದಂಬರಿಕಾರರಿ ಗಾದರೂ ಕೂಡ ಕಲಿಯಬೇಕಾದ ಹೊಸ ವಿಷಯ ಇದರಲ್ಲಿ ಎಷ್ಟೋ ಇದೆ. ಎಂಬುದನ್ನಾದರೂ ನಾನು ಆತ್ಮವಿಶ್ವಾಸದಿಂದ ಹೇಳಬಲ್ಲೆ. ಇರಲಿ. ಕಾದಂಬರಿಯೇ ಓದುಗರ ಕೈಯಲ್ಲಿರುವಾಗ ಅದರ ಗುಣಾವಗುಣ ಉಪ ಯುಕ್ತತೆಗಳ ವಿಷಯದಲ್ಲಿ ಚರ್ಚೆ ಏಕೆ? ಆ ಕಾರ್ಯವನ್ನು ವಾಚಕರೂ ವಿಮರ್ಶಕರೂ ಮಾಡಿಯೇ ಮಾಡುವರು.

ಉತ್ತಮ ಕಾದಂಬರಿ

ಕರಾದ ಶ್ರೀ. ವಿ. ಸ. ಖಾಂಡೆ

ಅನುಮತಿ ಬೇಡಿದ ಕೂಡಲೆಯೇ ಒಪ್ಪಿ,

ೃಂದಕ್ಕೆ ಈ ಸರಸ ಕಾದಂಬರಿಯನ್ನು ಒಪ್ಪಿಸುವ

ವನ್ನು ತಂದುಕೊಟ್ಟಿದ್ದಕ್ಕೆ ನಾನು ಅವರಿಗೆ ಚಿರಋಣಿಯಾಗಿ ದ್ದೇನೆ. ಇದಲ್ಲದೆ ಇಂಥ ದೊಡ್ಡ ಕಾದಂಬರಿಯನ್ನು ಮನೋಹರ ಗ್ರಂಥ ಮಾಲೆಯಲ್ಲಿ ಪ್ರಕಟಿಸಲು ಒಪ್ಪಿ ಹಸ್ತಲಿಖಿತ ಪ್ರತಿಯನ್ನಾದರೂ ತಾವೇ ತಯಾರಿಸಿಕೊಳ್ಳುವೆವೆಂದು ಹೇಳಿ ಇದೇ ಕೆಲಸವನ್ನು ಅತಿ ಪರಿಶ್ರಮ ದಿಂದ ಪಾರುಗಾಣಿಸಿದ, ಸಂಪಾದಕರ ಉಪಕಾರವನ್ನು ಎಷ್ಟು ಮನ್ನಿ ಸಿದರೂ ತೀರದು. ಅದರಂತೆಯೇ ಪ್ರೆಸ್ಸಿಗೆಕೊಡುವ ಮೊದಲು,ಅನುವಾದ ವನ್ನು ಮೊದಲಿನಿಂದ ಕೊನೆಯವರೆಗೆಓದಿ ನೋಡಿ ಎಷ್ಟೋ ಮಹತ್ವದ ವಿಷಯಗಳಲ್ಲಿ ಮಾರ್ಗದರ್ಶಕರಾಗಿ ಶ್ರಮವಹಿಸಿದ ಪ್ರೊ. ಮುಂಗಳಿಯವರಿ ಗಾದರೂ ನಾನು ಕೃತಜ್ಞನಾಗಿದ್ದೇನೆ. ಕಾದಂಬರಿಯು ಅನುವಾದವೇ ಆಗಿದ್ದರೂ ಕನ್ನಡಿಗರ ಹೃದಯವನ್ನು ಸೆಳೆದು ಅವರ ಪ್ರೀತ್ಯಾದರಗಳಿಗೆ ಪಾತ್ರವಾದಲ್ಲಿ ನನ್ನ ಶ್ರಮ ಸಫಲವಾಯಿತೆಂದು ಬಗೆಯುವೆ.

ವ್ಹಿ. ಎಂ. ಇನಾಮದಾರ

ಮನೋಹರ ಗ್ರಂಥಮಾಲೆಯ ೫ನೆ ವರ್ಷದ

೪ನೆಯ ಕುಸುಮ

# ಸಮುದ್ರದಾಚೆಯಿಂದ

## ಭಾಗ ೨

(ಇಂಗ್ಲೆಂಡದಿಂದ ಬಂದ ಪತ್ರ ಮತ್ತು ದಿನಚರಿಗಳ ಸಂಗ್ರಹ)

ಬರೆದವರು :–

**ವಿ. ಕೃ. ಗೋಕಾಕ ಎಂ. ಎ.**

# ೧೧

## ಹಣ್ಣೆಲೆಗಳೂ ಚಿಗುರೆಲೆಗಳೂ

ಸುರಂಗೆಯು ಸತಾರು ಬಾರಿಸತೊಡಗಿದಳು. ರಮಾಕಾಂತನಿಗೆ ತುಂಬಿಗಳ ಗುಂಜಾರವವನ್ನು ಕೇಳಿದಂತೆ ಭಾಸವಾಯಿತು. ಸತಾರಿನ ತಂತಿಗಳ ಮೇಲೆ ಅವಳ ಬೆರಳುಗಳು ಕ್ಷಣಾರ್ಧದಲ್ಲಿ ವಿಶ್ವಗೋಲದಿಂದ ಸ್ವರ್ಗದವರೆಗೆ ಹೋಗುವ ಕವಿಕಲ್ಪನೆಯಂತೆ ನರ್ತಿಸತೊಡಗಿದವು. ಸ್ವಲ್ಪಕಾಲದಲ್ಲಿಯೇ ನಾದಮಧುರಸ್ವರದಿಂದ ಕೋಣೆಯು ತುಂಬಿ ತುಳುಕುತ್ತಿತ್ತು. ಒಮ್ಮೆ ಸತಾರು ಬಾಲಕರ ಸ್ವಚ್ಛಂದದಿಂದ ಆಲಾಪ ತೆಗೆಯುತ್ತಿತ್ತಾದರೆ, ಮತ್ತೊಮ್ಮೆ ರಮಣಿಯರ ಮುಗ್ಧಪ್ರಣಯ ಕೂಜನವನ್ನು ಪ್ರಕಟಮಾಡುತ್ತಿತ್ತು. ಮರುಕ್ಷಣದಲ್ಲಿಯೇ ಹೃದ್ಯ ಸಂತೆ ಶಾಂತವಾದ ಮಾತುಗಳನ್ನೇ ಹೇಳಿದಂತೆ ಕೇಳಬರುತ್ತಿತ್ತು. ನಡು ನಡುವೆ ಹೊರಡುವ ಅತ್ಯಂತ ಕೋಮಲ ಸ್ವರವು ಮಧುರ ಬಾಲಿಕೆಯ ಕಂಠದೊಳಗಿಂದ ಹೊರಟ ಧ್ವನಿಯಂತೆ ಭಾಸವಾಗುವಂತಿತ್ತು. ಸುರಂಗೆಯ ವಾದನ ಕೌಶಲ್ಯವು ಅಷ್ಟೊಂದು ಅಪ್ರತಿಮವಾಗಿತ್ತು. ಅವಳೊಂದು ಶೃಂಗಾರಿಕ ಪದವನ್ನು ಬಾರಿಸಿದಾಗ ಲತಾಮಂಟಪದ ಹಿಂದೆ, ಮಂದಮಾರುತನಿಗೂ ಕೇಳಬರದಂತೆ ಪ್ರಣಯಿಗಳ ಜೋಡೊಂದು ಮೃದುಸ್ವರದಲ್ಲಿ ಮಾಡುವ ಪ್ರೇಮಗೋಷ್ಠಿಯಂತೆ ರಮಾಕಾಂತನಿಗೆ ಅದು ಭಾಸವಾಯಿತು. ಅವಳು ಭೈರವಿಯನ್ನು ಬಾರಿಸುವಾಗ, ತನ್ನ ಒಬ್ಬನೇ ಒಬ್ಬ ಮಗನು ದೇಶದ ಸಲುವಾಗಿ ಗಲ್ಲಿಗೆ ಹೋಗುವಾಗ ಆತನನ್ನು ತಬ್ಬಿಕೊಂಡು ಅಳುವ ತಾಯಿಯ ಚಿತ್ರವು ಆತನ ಕಣ್ಣುಗಳ ಮುಂದೆ ನಿಂತಿತು. ಸತಾರಿನ ಆ ಮೃದು, ಮುಗ್ಧ, ಮಧುರ ಸ್ವರಗಳ ದ್ವಾರದಿಂದ ನೇತ್ರಪಲ್ಲವಿಯೇಕೆ, ಹೃದಯದ ಭಾಷೆಯೂ ಪ್ರಕಟವಾಗಬಹುದು ಎಂಬ ವಿಚಾರವು ರಮಾಕಾಂತನ ಮನಸ್ಸಿನಲ್ಲಿ ಬರದೆ ಇರಲಿಲ್ಲ.

'ಆ ಸತಾರು ಕೆಳಗಿಡು' ಎಂದು ರಮಾಕಾಂತನು, ತೂಗುವ ಕುರ್ಚಿಯ ಮೇಲೆ ತೂಗಿಕೊಳ್ಳುತ್ತ ಅಂದನು.

'ಯಾಕೆ? ಬೇಸರಾಯಿತೇ?' ಸುರಂಗೆಯು ಸತಾರನ್ನು ಕೆಳಗೆ ಇರಿಸುತ್ತ ಕೇಳಿದಳು.

'ಹೆಂಗಸರಿಗೆ ಆಭರಣಗಳ ಬೇಸರ ಬರಬಹುದು ಒಂದು ವೇಳೆ. ಆದರೆ—'

'ಮುಚ್ಚಿಕೊಳ್ಳುವ ವಿದ್ಯೆ ಒಳ್ಳೇ ಸಾಧಿಸುವದು ನಿನಗೆ' ಎಂದು ಸುರಂಗೆಯು ಪಲ್ಲಂಗದ ಮೇಲೆ ಕುಳಿತು ತುಸು ವಕ್ರ-ದೃಷ್ಟಿಯಿಂದ ಆತನನ್ನು ನೋಡುತ್ತ ಅಂದಳು.

'ಇಲ್ಲಿ ನನ್ನ ಜೀವ ಹೋಗುತ್ತದೆ—'

'ಅಂಥಾದ್ದೇನು ನಾನು ನಿಮ್ಮ ಜೀವ ತಗೊಂಡೆ?'

'ನೀನೇನು ಸತಾರು ಬಾರಿಸುತ್ತಿದ್ದೆಯೊ?'

'ಇಲ್ಲ! ನಾನು ಬಾರಿಸಿದ್ದು ನಗಾರಿ!'

'ಕಲಾವಂತನು ಒಮ್ಮೆ ರಂಗಿಗೆ ಬಂದನೆಂದರೆ ಆತನಿಗೆ ಯಾತರದೂ ಅರಿವೇ ಉಳಿಯುವದಿಲ್ಲ.'

'ಅಂದರೆ? ನಾನು ಮಾಡಿದ್ದಾದರೂ ಏನು?'

'ನಿನ್ನ ಬೆರಳುಗಳು ಸತಾರಿನ ಮೇಲೆ ಆಡುತ್ತಿದ್ದುವು ಇಷ್ಟೇ. ಆದರೆ ಅದರ ಗತಿಗಳೆಲ್ಲ ಇಲ್ಲಿ' ಎಂದು ರಮಾಕಾಂತನು ತನ್ನ ಎದೆಯ ಎಡಭಾಗದ ಕಡೆಗೆ ಕೈಯೊಯ್ಯುತ್ತ ಅಂದನು.

'ತಂತಿಗಳಾವೂ ಹರಿಯಲಿಲ್ಲವಲ್ಲಾ?'

'ತಂತಿಗಳೇನೋ ಹರಿಯಲಿಲ್ಲ— ಆದರೆ ಸ್ವರಗಳಿಗೆ ಹೊರಗೆ ಹೋಗಲು ದಾರಿಯಿಲ್ಲ. ಅಲ್ಲಿಯೇ ಅವು ಪ್ರತಿಧ್ವನಿಸಹತ್ತಿವೆ. ಹೃದಯವೆಷ್ಟು ಜಡವಾಗಿದೆ ನನ್ನದು!'

'ಅದರ ಭಾರವು ಕಡಿಮೆ ಹೇಗಾಗಬೇಕು? ಅದಕ್ಕೆ ಔಷಧ—'

'ಎರಡನೇ ಹೃದಯ.'

ಸುರಂಗೆಯು 'ಏನಾದರೊಂದು ಮಾತಾಡುವಪರಿ ಆಯಿತು' ಎಂಬ

ಅರ್ಥವನ್ನು ತನ್ನ ಗೋಣಿನಿಂದಲೇ ಅಭಿನಯಿಸಿದಳು. ರಮಾಕಾಂತನ ಮಾತು ಅವಳಿಗೆ ಸೇರಿತೆಂಬುದು ಅವಳ ಮುಖದ ಮೇಲಿಂದಲೇ ತಿಳಿಯ ಬಹುದಾಗಿತ್ತು. ಇದನ್ನು ತಿಳಿದು ಉತ್ತೇಜನ ಹೊಂದಿ ರಮಾಕಾಂತನು 'ಒಂದು ಶರೀರಕ್ಕೆ ರಕ್ತ ಕಡಿಮೆಬಿದ್ದರೆ, ಎರಡನೇ ಶರೀರದೊಳಗಿಂದ ತಂದು ಅದರಲ್ಲಿ ಹಾಕುವರು. ಇದು ನಿನಗೆ ಗೊತ್ತಿದೆಯೆ?' ಎಂದು ಕೇಳಿದನು.

'ಹೀಗೇನೋ ಕೇಳಿರುವೆನು ನಿಜ. ಆದರೆ ಬೇಕಾದವರ ರಕ್ತ ನಡೆಯುವದಿಲ್ಲವಂತೆ. ಒಬ್ಬರೊಬ್ಬರಂತೆಯೇ ಇರಬೇಕಾಗುತ್ತದಂತೆ ರಕ್ತ.

'ಹೃದಯಗಳವಾದರೂ ಅದರಂತೆಯೇ....'

'ಈಗ ತಿಳಿಯಿತು ನನಗೆ ?'

'ಏನದು ?'

'ಸತಾರು ಬಾರಿಸುವದು ಕೇಳಲಿಕ್ಕೆ ಯಾಕೆ ಬೇಸರಾಯಿತು ಎನ್ನುವದು!'

'ಯಾಕೆ ?'

'ಹೃದಯದ ಭಾರವನ್ನಿಳಿಸಲಿಕ್ಕೆ ಎರಡನೇ ಹೃದಯವು ಇಲ್ಲಿ ಇಲ್ಲವೆಂದು.'

'ಅಂದರೆ– ನಿನಗೆ ಹೃದಯವೇ ಇಲ್ಲವೋ ?'

'ಸುಲೋಚನೆಯು ಇಂದು ಊರಲ್ಲಿ ಇರಲಿಕ್ಕೆ ಹೋಗಲಿಲ್ಲವೇ? ಅಂದಮೇಲೆ—'

ಖುರ್ಚಿಯ ಮೇಲಿಂದ ಏಳುತ್ತ ರಮಾಕಾಂತನು ಕರೆದ. 'ಸುರಂಗಾ—' ಆತನ ಸ್ವರದಲ್ಲಿಯೂ ದೃಷ್ಟಿಯಲ್ಲಿಯೂ ಉತ್ಸಾಹವು ಸ್ಪಷ್ಟವಾಗಿ ಕಂಡುಬರುತ್ತಿತ್ತು. ಸುರಂಗೆಗೆ ಮನಸ್ಸಿನಲ್ಲಿ ಹೇಗೋ ಆನಿಸಿತು. ಬೆಳಗಾವಿಗೆ ಬಂದಾಗಿನಿಂದ ಸುಲೋಚನೆಯು ಆತನ ಜೊತೆಯಲ್ಲಿ ಯಾವಾಗಲೂ ಇರುತ್ತಿದ್ದಳು. ಅದ್ದರಿಂದ ರಮಾಕಾಂತನು ಸೂಚಕತೆಯಿಂದ ವ್ಯಕ್ತಪಡಿಸಿದ ಪ್ರಣಯ ಚಿನ್ಹಗಳು ಆವಳಿಗಷ್ಟೇ ತಿಳಿಯುವಂತಿದ್ದವು. ಕಳೆದ ವಾರದಲ್ಲಿ, ಬೇಗನೇ ಬರುವ ಸಲುವಾಗಿ

ಸುಲೋಚನೆಯ ತಂದೆಯವರಿಂದ ೨–೩ ಪತ್ರಗಳು ಬಂದವು. ಆ ಮೂಲಕ ಮರುದಿವಸ ಅಂಬೋಲಿಘಟ್ಟವನ್ನು ನೋಡಿಕೊಂಡು, ಅವಳೂ ರಮಾಕಾಂತನೂ ಮುಂದೆ ಹೋಗಬೇಕೆಂದು ಕಾರ್ಯಕ್ರಮವು ನಿಶ್ಚಯಿಸಲ್ಪಟ್ಟಿತ್ತು.

ಅವಳ ತಂದೆಗೆ ಊರಲ್ಲಿ ಯಾರೂ ಮಿತ್ರರು ಇರಲಿಲ್ಲ. ಅವಳನ್ನು ಇಂದು ಅತ್ಯಂತ ಬಹುಮಾನದಿಂದ ತಮ್ಮ ಕಡೆಗೆ ಇರಲಿಕ್ಕೆ ಕರೆದುಕೊಂಡು ಹೋಗಿದ್ದರು. ರಮಾಕಾಂತನಿಗಾದರೂ ಅವರು ಕರೆದಿದ್ದರು. ಆದರೆ ಸುರಂಗೆಗೆ ಆಮಂತ್ರಣವಿರದ್ದರಿಂದ ಆವನೂ ಹೋಗಲಿಲ್ಲ! ಅದೇಕೆ, ತನ್ನ ಕೂಡ ಏಕಾಂತದಲ್ಲಿ ಮಾತಾಡಲಿಕ್ಕೆ ಸಿಗಬೇಕೆಂತಲೇ ಆತನು ಆಮಂತ್ರಣವನ್ನು ಅಲ್ಲಗಳೆದನೆಂದು ಸುರಂಗೆಗೆ ಅನಿಸಿತು.

'ಸುರಂಗಾ'— ಎಂದು ಕರೆದು ರಮಾಕಾಂತನು ಕ್ಷಣಹೊತ್ತು ಸ್ತಬ್ಧನಾಗಿ ಉಳಿದನು. ತನ್ನ ಸ್ವಂತದ ಕಂಪಯುಕ್ತ ಸ್ವರವನ್ನು ಕೇಳಿ ತನ್ನದು ತನಗೇ ಆಶ್ಚರ್ಯವಾಯಿತು. ಕಳೆದ ಮೂರು ನಾಲ್ಕು ತಿಂಗಳಲ್ಲಿ ಸುರಂಗೆಯ ಸೌಂದರ್ಯದ ಪರಿಣಾಮವು ಆತನ ಮೇಲೆ ಮೋಹವನ್ನು ಉಂಟುಮಾಡುವ ಒಂದು ಔಷಧದಂತೆ ಆಗಿತ್ತು. ಬೆಳಗಾವಿಯ ಮುಕ್ಕಾಮಿನಲ್ಲಿಯಂತೂ ಈ ಔಷಧವು ಆತನ ರಕ್ತದಲ್ಲಿ ಹೆಚ್ಚಾಗಿ ಬೆರೆತಿತ್ತು. ಕಂಪನಿಯ ಕೆಲಸಗಳ ಮೂಲಕ ಮ್ಯಾನೇಜರರಿಗಂತೂ ಸುರಂಗೆಯ ಕೂಡ ಬರುವದು ಶಕ್ಯವಿರಲಿಲ್ಲ. ನೋಕರಚಾಕರರೆಂದರೆ ಹೇಳಿಕೇಳಿ ಸಂಬಳಕ್ಕೆ ಸರಿಯಾಗಿ ಕೆಲಸ ಮಾಡುವವರು! ಪರ್ವತವು ಎಷ್ಟು ಎತ್ತರವಾದರೂ ಆಕಾಶದಿಂದ ಸಿಡಿದು ಬೀಳುವ ತಾರೆಗೆ ಆಸರವಾದೀತೇ?

ಸುಲೋಚನೆಯು ಅಂತರಪಡದೆಯಾಗಿ ಇದ್ದಳೆಂದೆ! ಇಲ್ಲವಾದರೆ–

ಆದರೆ ಇಂದು ರಮಾಕಾಂತನ ಸುದೈವದಿಂದ ಸುಲೋಚನೆಯು ಊರಲ್ಲಿರಲಿಕ್ಕೆ ಹೋದಳು. ಬೆಳಗಾವಿಯ ಹವೆಗೆ ಸುರಂಗೆಯ ಪ್ರಕೃತಿಯಾದರೂ ಹಾ ಹಾ ಅನ್ನುವದರಲ್ಲಿ ಸುಧಾರಿಸಿತು. ಆ ಮೂಲಕ ಸುಲೋಚನೆಯ ಚಿತ್ರದ ಕೆಲಸವಾದರೂ ಚನ್ನಾಗಿ ಸಾಗಿತ್ತು. ಇಂದು ಊಟವಾದಕೂಡಲೆ ಸುರಂಗೆಗೆ ಸತಾರು ಬಾರಿಸುವ ಲಹರಿಯಾಯಿತು.

ರಮಾಕಾಂತನಿಗಾದರೂ ಇಂಥ ಮಧುರ ವಾತಾವರಣವು ಬೇಕೇ ಆಗಿತ್ತು. ಸುರಂಗೆಯ ಕೋಮಲ ಬೆರಳುಗಳೊಡನೆ ಆತನ ಹೃದಯವೂ ನರ್ತಿಸ ತೊಡಗಿತ್ತು. ತನ್ನ ಅಸ್ತಿತ್ವದ ಅರಿವು ಕೂಡ ತಾಪದಾಯಕವಾಗು ವಷ್ಟು ಅವಳ ಗಾಯನ ವಾದನ ಕೌಶಲ್ಯವು ಆತನ ಪ್ರೇಮವೃತ್ತಿಯನ್ನು ಚಂಚಲವಾಗಿ ಮಾಡಿಬಿಟ್ಟಿತ್ತು. ಈ ಅರಿವನ್ನೇ ಮರೆಯಬೇಕು– ಒಂದು ನಿರಾಕಾರ ಆಸಂದವನ್ನೇ ಸವಿಯಬೇಕೆಂಬ ಉತ್ಕಟವಾದ ಉತ್ಕಂಠೆಯು ಆತನ ಮನಸ್ಸಿನಲ್ಲಿ ಉತ್ಪನ್ನವಾಯಿತು.

ಆತನು ಮತ್ತೊಮ್ಮೆ ಅವಳನ್ನು ಕರೆದ 'ಸುರಂಗಾ—' ಸುರಂಗೆ ಯು ಈ ಕರೆಗೆ ಬೆದರಲಿಲ್ಲ. ಇದಕ್ಕೆ ಅವಳು ಪರಿಚಿತಳಾಗಿದ್ದಳು. ಆದರೆ ಅವಳಿಗೆ ತಿಳಿಯದೆಯೆ ಅವಳ ಕಣ್ಣುಗಳ ಮುಂದೆ ಮೂರು ಚಿತ್ರಗಳು ಕುಣಿದುಹೋದವು. ತೊಪ್ಪಲು ಹೊಚ್ಚಿದ ಗುಡಿಸಲು ಹಾಗೂ ಸಾವಳ ಗಿಗೆ ನಾಚಿಕೊಂಡು ದೂರ ಸರಿದು ನಿಲ್ಲುವ ತುಳಸಿ— ಊರಲ್ಲಿಯ ಜಮೀನದಾರನ ಮನೆ, ಅಲ್ಲಿ ತಾನು ಒಕ್ಕಲಗಿತ್ತಿಯಂತೆ ಕೆಲಸ ಮಾಡು ತ್ತಿರುವಾಗ ಆತನು ಹಿಡಿದ ಕೈ— ಬಾಯಿ ತೆರೆಯಬೇಕೆಂದು ತನ್ನ ಮನಸಿನಲ್ಲಿ ಬಂದಿತ್ತು, ಆದರೇನು? ಆತನು ತಟ್ಟನೆ ತನ್ನ ಮುಷ್ಟಿಯ ನ್ನೊತ್ತಿದ. ಅದರಲ್ಲಿ ರೊಕ್ಕವನ್ನು ನೋಡಿದಕೂಡಲೆ, ಕಂಠದವರೆಗೂ ಬಂದ ತನ್ನ ಧ್ವನಿಯು ಅಲ್ಲಿಯೇ ತಟ್ಟಿ ನಿಂತುಬಿಟ್ಟಿತು.

ಇಂದಿನದು ಮೂರನೇ ಚಿತ್ರ! ರಮಾಕಾಂತನಂಥ ಶ್ರೀಮಂತ ಮತ್ತು ಕಲಾವಂತ ತರುಣನು ತನ್ನನ್ನು ಕರೆಯುತ್ತಲಿದ್ದ. ಕರೆಯೋಣ ವೇತರದು? ಸೃಷ್ಟಿಕರ್ತನ ಮೋಹಿನೀ ಮಂತ್ರವೇ ಅದು. ಆ ನಿಮಂತ್ರಣ ದಲ್ಲಿ ವಸಂತನ ಸುಗಂಧವೂ ಚಂದ್ರನ ತಂಪೂ ಇದ್ದವು. ಕಂಪನಿಯಲ್ಲಿ ಸೇರಿದನಂತರ ಮೊದಲಿನ ಎರಡು–ಮೂರು ವರ್ಷ ಗಾಯನವನ್ನು ಕಲಿಯುವದರಲ್ಲಿಯೂ ತನ್ನ ಕೆಲಸವನ್ನು ಒಳ್ಳೇ ರೀತಿಯಿಂದ ಮಾಡು ವದರಲ್ಲಿಯೂ ಕಳೆದಿದ್ದಳು. ಆಗ ಅವಳಿಗೆ ಸುಖ ವಿಲಾಸಗಳ ಕಡೆಗೆ ಲಕ್ಷ್ಯವೇ ಇರಲಿಲ್ಲ. ಆದರೆ ಕಳೆದ ಮೂರು ವರುಷಗಳಲ್ಲಿ ಅವಳು ಒಳ್ಳೇ ಚನ್ನಾಗಿ ನೆಲೆಗೊಂಡು ದೊಡ್ಡ ಪಗಾರವನ್ನು ಗಳಿಸುತ್ತಿದ್ದಳು. ಜರದ

ಪತ್ತಲಗಳು, ಆಭರಣಗಳು, ಬೆಲೆಯುಳ್ಳ ಅತ್ತರಗಳು, ಕನ್ನಡಿಯಲ್ಲಿಯ ಪ್ರತಿಬಿಂಬಗಳು, ಸುತ್ತಲಿನ ದೃಶ್ಯಗಳು ಇವೆಲ್ಲವುಗಳೂ ಕೂಡಿ ಅವಳಿಗೆ 'ಮುಗ್ಧೆ, ಏಳು. ಇದು ನಿನಗೆ ಜೋಗಿಣಿಯಾಗಿ ಬಾಳುವ ವಯಸ್ಸೇ?' ಎನ್ನುವಂತೆ ಆಗಿದ್ದುವು.

ಆದರೆ ಮ್ಯಾನೇಜರನ ಕಠೋರ ಶಿಸ್ತಿನ ತುರಂಗದಲ್ಲಿ ತಳಮಳಿಸುವುದರ ಹೊರತು ಅವಳಿಗೆ ಏನೂ ಮಾಡಲಿಕ್ಕೆ ಬರುತ್ತಿರಲಿಲ್ಲ. ಆತನೇ ಅವಳನ್ನು ಅನ್ನದ ಮಾರ್ಗಕ್ಕೆ ಹಚ್ಚಿದವನು. ಅವನ ಪ್ರಯತ್ನದ ಮೂಲಕವೇ ಅವಳಿಗೆ ಇಷ್ಟೊಂದು ಧನವೂ ಕೀರ್ತಿಯೂ ದೊರೆತಿತ್ತು. ಅವಳ ಕೃತಜ್ಞ ಮನವು ಅವನ ವಿರುದ್ಧ ಹೋಗಲೆಳಸಿದ್ದಿಲ್ಲ. ರಮಾಕಾಂತನ ನಾಟಕವನ್ನು ಕಂಪನಿಯವರು ಕೂಡಿಸಲಿಕ್ಕೆ ಆರಂಭಮಾಡಿದಂದಿನಿಂದ ಈ ತುರಂಗವಾಸದಿಂದ ಬಿಡುಗಡೆಯಾಗಬಹುದೆಂಬ ಆಶೆಯು ಅವಳ ಮನಸ್ಸಿನಲ್ಲಿ ಉತ್ಪನ್ನವಾಯಿತು. ತನ್ನ ಪ್ರೇಮವು Platonic (ಪ್ಲೆಟೋನಿಕ್) ಅದೆ, ಶಾರೀರಿಕವಿಲ್ಲವೆಂದು ಸ್ವತಹದ ವಿಷಯದಲ್ಲಿ ರಮಾಕಾಂತನ ತಿಳುವಳಿಕೆಯಿತ್ತು. ಆದರೆ ಅವನ ಹೃದಯದ ಪ್ರತಿಬಿಂಬವನ್ನು ಸುರಂಗೆಯು ಯಾವಾಗಲೋ ಗುರುತಿಸಿದ್ದಳು. ಒಂದು ಕ್ಷಣ ಇದು ತೋರಿಕೆಗೆ ಮಾತ್ರ ಸುಶಿಕ್ಷಿತ ಮತ್ತು ಕಲಾವಂತ ಮನುಷ್ಯನ ನಿರ್ದೋಷ ಸೌಂದರ್ಯಪ್ರೇಮವಿದೆ ಎಂದೆನಿಸುತ್ತಿತ್ತು. ಆದರೆ ಮರುಕ್ಷಣದಲ್ಲಿಯೇ ಅವಳಿಗೆ ತಿಳಿದು ಬಂತು—ಅದು ಕಥಾ ಲೇಖಕನ ಗಾಯಿಕೆಯ ಮೇಲಿನ, ಕಲಾವಂತನ ಕಲೆಯ ಮೇಲಿನ ಪ್ರೀತಿಯಾಗಿರಲಿಲ್ಲ. ಆದರೆ ಅದು ಸ್ತ್ರೀಯ ಮೇಲಿನ ಪುರುಷನ ಪ್ರೇಮವೇ ಆಗಿತ್ತು.

ಅದು ಸ್ತ್ರೀಪುರುಷರ ಪ್ರೇಮವೇ ಇದ್ದ ಬಗ್ಗೆ ಸುರಂಗೆಗೆ ಏನೂ ಆಶ್ಚರ್ಯವಾಗಲಿಲ್ಲ ವೇಶ್ಯೆಯ. ಉದ್ಯೋಗದಲ್ಲಿ ತನ್ನ ತಾಯಿಗೆ ಬಂದ ಅನುಭವವು ಅವಳ ಹೃದಯದ ಮೇಲೆ ಚಿಕ್ಕಂದಿನಲ್ಲಿಯೇ ಚೆನ್ನಾಗಿ ಕೊರೆಯಲ್ಪಟ್ಟಿತ್ತು. ಬಹಿರಂಗದಲ್ಲಿ ತಾವು ತೊಳೆದ ಅಕ್ಕಿಯಂತೆ ಕಲಂಕರಹಿತರೆಂದು ಮೆರೆಯುವವರು, ಅಂತರಂಗದಲ್ಲಿ ಉಟ್ಟಿಗಿಂತಲೂ ಹೇಗೆ ಕಪ್ಪಾಗಿರುವರು, ಸೂಳೆಯರನ್ನು ನೋಡಿ ಹೇಗೆ ಮುರಿಯುವ

ಗರತಿಯರ ಹೊಟ್ಟೆ ಹೇಗೆ ಉರಿಯುವದು, ೧೫ ವರುಷದ ವಯಸ್ಸಿನಿಂದ ೭೫ ವರುಷದ ಮುಪ್ಪಿನವರೆಗೂ ಎಲ್ಲ ಪುರುಷರು ಹಾದೀ ಹಿಡಿದು ಹೋಗುವ ಸರ್ವಸಾಧಾರಣ ಹೆಂಗಸಿನ ಕಡೆಗೆ ತಿರುಗಿ ತಿರುಗಿ ಹೇಗೆ ನೋಡುವರು, ಸಂಭಾವಿತರೆಂದು ಹೇಳಿಕೊಳ್ಳುವವರ ಮನೆಯಲ್ಲಿಯೇ ಎಷ್ಟು ಗೊಂದಲವಿರುವದು—ಒಂದೇ ಎರಡೇ, ಇಂಥ ನೂರಾರು ಸಂಗತಿಗಳು. ಮೊದಲೇ ಸುರಂಗೆಯ ತಾಯಿಯದು ಎಲುವಿಲ್ಲದ ನಾಲಿಗೆ. ಅದರಲ್ಲಿಯೂ ವೇಶ್ಯೆಯ ಉದ್ಯೋಗದ ಅನುಭವ!

ಇದರ ಮೂಲಕವೇ ಒಂದಿಲ್ಲೊಂದು ದಿನ ರಮಾಕಾಂತನು ತನ್ನೊಡನೆ ಹೆಚ್ಚು ಸಲಿಗೆಯಿಂದ ವರ್ತಿಸುವನೆಂಬುದು ಸುರಂಗೆಗೆ ನಂಬಿಗೆಯಿತ್ತು. ಆ ಹುಣ್ಣಿಮೆಯ ದಿವಸ ಅವಳು ಆತನ ಸಂಗಡ ಜುಹು ಸಮುದ್ರತೀರಕ್ಕೆ ಹೋದದ್ದಾದರೂ ಅದೇ ಕಾರಣದಿಂದಲೇ. ತನ್ನ ಮನಸ್ಸಿನಲ್ಲಿಯ ಮಾತುಗಳನ್ನೆಲ್ಲ ಹೇಳಲಿಕ್ಕೆ ಬರಲಿಕ್ಕಿಲ್ಲವೆಂದು ಅವಳು ತನ್ನ ಜೊತೆಯಲ್ಲಿ ಒಂದು ಪತ್ರವನ್ನು ಒಯ್ದಿದ್ದಳು. ಆದರೆ ವಿಚಿತ್ರ ಘಟನೆಯಿಂದ ಪತ್ರವಂತೂ ರಮಾಕಾಂತನ ಕೈ ಸೇರಲೇ ಇಲ್ಲ. ತಿರುಗಿ ಮತ್ತೆ ಯಾರಿಗಾದರೂ ಸಿಕ್ಕಿರಲಿಕ್ಕಿಲ್ಲವಲ್ಲ ಎಂಬ ವಿಚಾರವು ಅವಳ ಮನಸ್ಸಿನಲ್ಲಿ ಎಷ್ಟೋ ದಿವಸ ಕಟಿಯುತ್ತಿತ್ತು.

ರಮಾಕಾಂತನು ದಿಟ್ಟತನದಿಂದ ಅವಳ ಕಡೆಗೆ ನೋಡುತ್ತ ಅಂದನು—'ಸುರಂಗಾ, ನೀನು ನನ್ನವಳಾಗುವಿಯಾ?' ಭೂಮಿಯೆಲ್ಲ ದೃಷ್ಟಿಯನ್ನು ಇಟ್ಟು ಸ್ವಲ್ಪ ಕಂಪಿತ ಸ್ವರದಿಂದ ಅವಳು ಉತ್ತರ ಕೊಟ್ಟಳು—'ನಾನು ನಿಮ್ಮವಳಾಗಬಲ್ಲೆನೆ?'

'ಅಂದರೆ?'

'ನಾನು—ನಾನು—ಯಾರೆಂಬುದು ಇದು—'

'ನೀನೇ? ನೀನು ಒಂದು ಸೌಂದರ್ಯದ ಮೂರ್ತಿ!'

'ಆದರೆ ಆ ಮೂರ್ತಿಯ ಹೃದಯದಲ್ಲಿ ಎಷ್ಟು ಪಾಪಗಳು—'

ಅವಳ ಎಡಗಡೆಯ ಭುಜದ ಮೇಲೆ ಕೈ ಇಟ್ಟು ಅವಳ ಕಡೆಗೆ ದಿಟ್ಟಿಸಿ ನೋಡುತ್ತ ರಮಾಕಾಂತನು ಅಂದನು—'ಎಂಥ ಹುಚ್ಚಿಯು ನೀನು? ಸೌಂದರ್ಯದ ಉಸಿರಿಗೂ ನಿಲ್ಲದು, ಪಾಪ—'

'ಆದರೆ ನನ್ನ ಸೌಂದರ್ಯವು ನಷ್ಟವಾದರೆ, ನಾಳೆಯೇ ಸ್ಟೋವ್ವಿನ ಅಪಘಾತದಿಂದ ನಾನು ಸುಟ್ಟುಕೊಂಡೆನೆಂದರೆ—'

'ಅಂದರೆ ನಾನು ಒಳ್ಳೇ ಉಪಚಾರ ಮಾಡುವೆ?' ರಮಾಕಾಂತನು ನಡುವೇ ನಸುನಗುತ್ತ ಅಂದನು.

'ನನ್ನಲ್ಲಿ ಚಲೋದು ಕೆಟ್ಟದು ಎಲ್ಲಾ ನೀವು. ಸರಿಮಾಡಿಕೊಂಡು ತಗೊಳ್ಳು ಸಿರಾ?'

'ಸರಿಮಾಡಿಕೊಳ್ಳುವದೇಕೆಬೇಕು? ಅದು ಸರಿಯಾಗಿಯೇ ಇದೆ'

ಸುರಂಗೆಯು ಭಯಾಕುಲದೃಷ್ಟಿಯಿಂದ ಆತನನ್ನು ನೋಡುತ್ತ ಅಂದಳು—'ಆ ದಿವಸದ ಪತ್ರವು ಕಳೆದು ಹೋಯಿತಲ್ಲ! ಅದನ್ನು ನಾನು ಮತ್ತೆ ಬರೆಯಬೇಕೆಂದು–ಆದರೆ—'

'ಆ ಪತ್ರ ತೆಗೆದುಕೊಂಡು ಮಾಡುವದಾದರೂ ಏನು? ಪ್ರಣಯದ ವ್ಯವಹಾರಗಳಿಗೆ ಲೇಖೀ ಸಾಕ್ಷಿಗಳಿಗಿಂತ ಜಾಯ ಸಾಕ್ಷಿಗಳೇ ಒಳ್ಳೆಯವು.'

ಅವಳ ಹೆಗಲು ಮೇಲೆ ಇಟ್ಟ ಆವನ ಕೈಯು ಥರಥರ ಕಂಪಿಸುತ್ತಿತ್ತು. ಮದಿರೆಯು ಸೇಲೆಯನ್ನೆತ್ತುವ ಮನುಷ್ಯನ ಕಣ್ಣುಗಳಲ್ಲಿಯ ಮದವು ಆತನ ಕಣ್ಣುಗಳಲ್ಲಿ ಸ್ಪಷ್ಟವಾಗಿ ಕಂಡುಬರುತ್ತಿತ್ತು. ತನ್ನ ಎಡಗೈಯಿಂದ ಅವಳ ಗದ್ದ ಹಿಡಿದು ಮುಖವನ್ನು ಸಾವಕಾಶವಾಗಿ ಮೇಲಕ್ಕೆತ್ತಿದಾಗ, ಅವಳು ಆತನಿಗೆ ಮಧುರ ಸ್ವರ ತೆಗೆಯುವ ಒಂದು ಕೋಮಲ ವೀಣೆಯಂತೆ ಭಾಸವಾದಳು. ಆ ಸ್ಪರ್ಶದಿಂದ ಆತನ ರಕ್ತದಲ್ಲಿ ಒಂದು ಸವಿಯಾದ ಸುಖಸಂಚಾರವು ನರ್ತಿಸತೊಡಗಿತು. ಅವನು ಸ್ವಲ್ಪ ಬಾಗಿದನು ಕೂಡ.

ಕಿಡಿಕಿಯ ಹತ್ತಿರ ಏನೋ ಸಪ್ಪಳವಾಯಿತು.

ಇಬ್ಬರೂ ಬೆಚ್ಚಿ ದೂರ ಸರಿದರು.

'ಸುಲೋಚನೆ ಬಂದಳೋ ಏನೋ?' ಎಂದು ಸುರಂಗೆಯು ನಡುಗುತ್ತ ಅಂದಳು.

'ಗಾಳಿ ಇರಬಹುದು!'

'ಛೇ, ಕಿಡಿಕಿಯು ಒಳ್ಳೇ ಜೋರಿನಿಂದಲೇ ಸಪ್ಪಳ ಮಾಡಿತು!'

'ಎಷ್ಟೊಂದು ಅಂಜುಪಿ ನೀನು!'

ಸುರಂಗೆಯು ಕಿಡಿಕಿಯ ಹತ್ತರ ಹೋದಳು. ಕಿಡಿಕಿಯ ಎರಡೂ ಪದಕುಗಳ ನಡುವೆ ಒಂದು ಸಂದಿ ಇತ್ತು. ಆ ಸಂದಿಯಲ್ಲಿ ಒಂದು ಚೀಟಿಯನ್ನು ಕಂಡಕೂಡಲೆ ಅವಳಿಗೆ ಹೇಗೋ ಆಯಿತು. ನಡುಗುತ್ತಲೆ ಆ ಚೀಟಿಯನ್ನು ತೆರೆದಳು. ಅದರೊಳಗಿನ ಸಮಾಚಾರದ ಮೇಲೆ ತನ್ನ ದೃಷ್ಟಿ ದಾಟಿದ ಕೂಡಲೆ ಅವಳು ಥರಥರ ನಡುಗತೊಡಗಿದಳು. ಹೊರಗಿನ ತಣ್ಣಗಿನ ಗಾಳಿಯು ಹೊಡೆತಕ್ಕೆ ಅವಳಿಗೆ ಮೈಮೇಲೆ ಮುಳ್ಳು ನಿಂತಿರ ಬಹುದು ಎಂದು ರಮಾಕಾಂತನಿಗೆ ಅನಿಸಿತು. ಅವಳ ಸಮೀಪಕ್ಕೆ ಹೋದಾಗ ಆ ಚೀಟಿಯ ಕಡೆಗೆ ಅವನ ಲಕ್ಷ್ಯವು ಹೋಯಿತು. ಅದರಲ್ಲಿ ಕೇವಲ ಎರಡೇ ಶಬ್ದಗಳು ಇದ್ದುವು.

**'ಕಾಮಾಪುರದ ಜಾತ್ರೆ'**

* * * *

ಸುಲೋಚನೆಯು ಸಹಜವಾಗಿ ಒಗೆದ ಚೀಟಿಯು ಕಿಡಿಕಿಯಲ್ಲಿ ಬಿದ್ದುಕೊಂಡಿರಬಹುದು ಎಂದು ರಮಾಕಾಂತನು ಸುರಂಗೆಯನ್ನು ಸಮಾಧಾನ ಪಡಿಸುವ ಪ್ರಯತ್ನ ಮಾಡಿದನು. ಆದರೆ ಚೀಟಿಯಲ್ಲಿಯ ಅಕ್ಷರಗಳು ಸುಲೋಚನೆಯವು ಅಲ್ಲವೆಂದು ಆತನಿಗೆ ಗೊತ್ತಿತ್ತು. ಸುರಂಗೆಯು ಪಲ್ಲಂಗದ ಮೇಲೆ ಬಿದ್ದುಕೊಂಡು ಭಯಚಕಿತ ದೃಷ್ಟಿಯಿಂದ ನೋಡು ತ್ತಿದ್ದಳು. ಇತರ ವೇಳೆಯಲ್ಲಿ ಆ ದೃಶ್ಯವು ರಮಾಕಾಂತನಿಗೆ ರಮಣೀಯ ವಾಗಿಯೇ ಕಾಣಬಹುದಾಗಿತ್ತು. ಆದರೆ ನಡುವೇ ಚಿತ್ರಪಟವು ಹರಿಯು ತೆಂದರೆ ಅದರಲ್ಲಿ ಸಮರಸವಾದ ಪ್ರೇಕ್ಷಕರಿಗೆ ವಿರಸವಾಗುವಂತೆ ಆತನ ಸ್ಥಿತಿಯು ಆಗಿತ್ತು. ಅವನು ಸ್ವಲ್ಪ ಸಿಡುಕಿನಿಂದ ಅಂದನು 'ಗಾಳಿಯ ಮೇಲೆ ಫಿರ್ಯಾದಿ ಮಾಡಲಿಕ್ಕೆ ಬರುವಂತಿದ್ದರೆ—'

'ಅದು ಏನು ಮಾಡೀತು ಪಾಪ?'

'ಹಾಗಾದರೆ ಕಿಡಿಕಿಯನ್ನು ಯಾರು ತೆರೆದರು?'

ಸುರಂಗೆಯು ಏನೂ ಮಾತಾಡಲಿಲ್ಲ.

'ಈ ಚಳಿಗಾಲದಲ್ಲಿಯು ಗಾಳಿ ದೆವ್ವದಂತೆ ಬಿರಬಿರನೆ ಬೀಸುತ್ತಿರುತ್ತದೆ.'

'ಅಂತೆಯೋ ನನಗೆ ಇಷ್ಟೊಂದು ಅದರ ಅಂಜಿಕೆ ಬರುವದು.'

'ಆದರೆ ಅದರಲ್ಲಿ ಒಂದು ಒಳ್ಳೇ ಗುಣವುಂಟು.'

'ಯಾವದದು?'

'ಎಲ್ಲ ಹಣ್ಣು ಎಲೆಗಳು ಉದುರಿ ಬೀಳುವವು ಅದರಿಂದ.'

'ಎಲ್ಲವೂ ಉದುರಿ ಬೀಳುವವೆ?'

'ಹೌದು'

'ಪ್ರತಿಯೊಂದೂ ಎಲೆ?'

'ಪ್ರತಿಯೊಂದೂ ಎಲೆ ಹೇಗೆ ಬಿದ್ದೀತು?'

'ನಾನಾದರೂ ಅನ್ನುವದು ಅದೆ. ಗಿಡದಮೇಲೆ ಕೆಲವಾದರೂ ಹಳೆಯ ಎಲೆಗಳು ಉಳಿಯತಕ್ಕವೆ'

'ಆದರೆ ಹೊಸ ಚಿಗುರಿನ ಮಾಸದಿಂದ ಅವು ತೀರ ಕಡಿಮೆಯೆ ಇರುವವು.'

'ಕಡಿಮೆಯೇ' ಎಂಬ ಶಬ್ದವನ್ನು ಉಚ್ಚರಿಸಿ, ಅರ್ಥ ಮಾಡುತ್ತೆ ಮಾಡಿ ಮೇಲೆ ಚಲ್ಲಿದ ಮುಚ್ಚರದಾಸಿಯ ಕಡೆಗೆ ನೋಡಿದಳು. ಅವಳ ದೃಷ್ಟಿಯು—ಗಿಡದಮೇಲೆ ಹಳೆಯ ಹಣ್ಣೆಲೆಗಳಿರುವಾಗಲೇ ಹೊಸ ಚಿಗುರುಗಳು ಒಡೆಯುವವು. ಆದರೆ ಮನುಷ್ಯನ ಆಯುಷ್ಯವೃಕ್ಷದಲ್ಲಿ ಹೀಗೆ ಎಲ್ಲಿ ಆಗುತ್ತದೆ—ಎಂದು ಅನ್ನುವಂತೆ ಇತ್ತು.

ಹೊರಗೆ ಗಾಳಿಯು ಹೊಡೆತಕ್ಕೆ ಉದುರಿ ಬೀಳುವ ಎಲೆಗಳ ಸಳಸಳ ಸಪ್ಪಳವು ಕೇಳಬರುತ್ತಿತ್ತು. ಆ ಸಪ್ಪಳವನ್ನು ಕೇಳಿದಂತೆ ಮಾಡಿ ಸುರಂಗೆಯು ಅಂದಳು 'ಕೇಳಿದಿರಾ ಅದನ್ನು?'

'ಅದರಲ್ಲಿ ಕೇಳುವದೇನು?'

'ಹಳೆಯ ಎಲೆಗಳು ಕೂಗುತ್ತಿರುವದಿಲ್ಲವೆ? ಅವುಗಳ ಮನಸ್ಸಿನಲ್ಲಿ ಯಂತೂ ಗಿಡವನ್ನು ಬಿಟ್ಟು ಹೋಗುವದಿರುವದಿಲ್ಲ ಮತ್ತು—'

ರಮಾಕಾಂತನು ನಗುತ್ತ ಅಂದನು 'ತಪ್ಪಿ ನಟಿ ಆದೆ ನೀನು ಸುರಂಗಾ, ಕವಯಿತ್ರಿಯೇ ಆಗುವವಳು'

'ಶಾಲೆ ಕಲಿತಿದ್ದರೆ ಅದೂ ಆಗಬಹುದಾಗಿತ್ತು'

ಸತಾರವಾದನದಿಂದ ವಾತಾವರಣದಲ್ಲಿ ಬಂದಿದ್ದ ಮಧುರ ಮೋಹವು ಯಾವಾಗಲೋ ಅಡಗಿಹೋಗಿತ್ತು ಎಂಬದನ್ನು ರಮಾಕಾಂತನು ಗುರುತಿಸಿದನು. ಕೂತಲ್ಲಿಯೇ ಆತನು ಆಕಳಿಸಿದನು.

'ಯಾರೋ ನೆನಿಸಿರುವರು!' ಎಂದಳು ಸುರಂಗೆ.

'ಎದುರು ಕುಳಿತ ಜನರು ನೆನಿಸುವದುಂಟೆ?'

'ಸುಲೋಚನೆ ನೆನಿಸಿರಬಹುದು'

'ನೆನಿಸುವದು ನಿನ್ನನ್ನು, ಆಕಳಿಕೆ ನನಗೆ! ಇದೊಳ್ಳೆ ನ್ಯಾಯ!'

'ನನ್ನನ್ನೇತಕ್ಕೆ ನೆನಿಸಿಯಾರು ಅವರು?'

'ನೀನು ಅವಳ ಲಕ್ಷ್ಮಿಯಲ್ಲವೆ? ಎರಡನೆಯದು ಯಾವದೂ ಅವಳ ಮನಸ್ಸಿನಲ್ಲಿ ಇಲ್ಲ....ಹಗಲೂ ರಾತ್ರಿ ಚಿತ್ರವೇ ಚಿತ್ರ! ನನ್ನ ನೆನಪನ್ನು ಬೇರೆ ಒಬ್ಬ ಹೆಂಗಸು ಮಾಡಿರಬಹುದು!'

ಗೋಣು ಹೊರಳಿಸಿ ಸುರಂಗೆಯು ವಿಚಾರಿಸಿದಳು.

'ಯಾರವಳು?

'ನಿದ್ರಾದೇವಿ'

ರಮಾಕಾಂತನು ಎದ್ದು ಹೋದ ನಂತರ ಸುರಂಗೆಗೆ ೫-೧೦ ನಿಮಿಷ ನೆಟ್ಟಗೆನಿಸಿತು. ವ್ಯಾಪಾರಿಯ ಪೆಟ್ಟಿಗೆಯಂತೆ ಮನುಷ್ಯನ ಮನಸ್ಸಿಗಾದರೂ ಒಂದು 'ಕಳ್ಳಕಿಸೆ' ಇದ್ದೇ ಇರುತ್ತದೆ. ಅದರೊಳಗಿನ ಪದಾರ್ಥಗಳನ್ನು ತೆರೆದು ನೋಡುವಾಗ ಅತ್ಯಂತ ಪ್ರೀತಿಯ ಮನುಷ್ಯನೂ ಸಮೀಪದಲ್ಲಿ ಇರಬಾರದೆಂದು ಅನಿಸುತ್ತದೆ. ಆ ಚೀಟಿಯಲ್ಲಿಯ 'ಕಾಮಾಪುರದ ಜಾತ್ರೆ' ಎಂಬ ಶಬ್ದಗಳನ್ನು ಓದಿ ಸುರಂಗೆಯ ಮನಃಸ್ಥಿತಿಯಾದರೂ ಇದರಂತೆಯೆ ಆಗಿತ್ತು. ೧೦ ವರ್ಷದ ಹಿಂದೆ ಆ ಜಾತ್ರೆಯಲ್ಲಿ ಕೊಂಡ ಪಾತ್ರೆಗಳು ಅವಳ ಕಣ್ಣು ಮುಂದೆ ಕಟ್ಟಿದವು. ಈಗ ಅಂಥ ಬೆಳ್ಳಿಯ ಪಾತ್ರೆಗಳನ್ನು ಕೊಳ್ಳುವ ಸಾಮರ್ಥ್ಯವು ಅವಳಲ್ಲಿ

ಇದ್ದರೂ, ಹತ್ತು ವರುಷಗಳ ಹಿಂದಿನ ತಾಮ್ರಹಿತ್ತಾಳೆಯ ಪಾತ್ರೆಗಳೇ ಅಮೃತದಿಂದ ತುಂಬಿಸಿದಂತೆ ಅವಳ ಕಣ್ಣುಗಳ ಮುಂದೆ ನಿಂತವು!

ನಿದ್ರೆಯಾದರೂ ಬರುತ್ತದೇನೆಂದು ಅವಳು ಸುಮ್ಮನೆ ಬಿದ್ದು ಕೊಳ್ಳುವ ಪ್ರಯತ್ನ ಮಾಡಿದಳು. ಆದರೆ ಮರುಕ್ಷಣದಲ್ಲಿಯೇ ಆ ಎಲ್ಲ ಪಾತ್ರೆಗಳು ದೇವಿಗೆ ಬಲಿಕೊಟ್ಟ ರಕ್ತದಿಂದ ತುಂಬಿದಂತೆ ಅವಳಿಗೆ ಕಾಣಿ ಸಿತು. ಅವಳು ಬೆಚ್ಚಿ ಒಮ್ಮೆಲೆ ಕಣ್ಣು ತೆರೆದಳು. ಮೊದಲಿನ ಕಿಡಿಕಿಯ ಕಡೆಗೆ ಸಹಜವಾಗಿ ನೋಡಿದ ಕೂಡಲೆ, ಅದರ ಹಿಂದೆ ಯಾರೋ ಇದ್ದ ಹಾಗೆ ಭಾಸವಾಯಿತು. ಒಮ್ಮೆಲೇ ಚೀರಬೇಕೆಂದು ತೋರಿತು. ಆದರೆ ಅದೆಲ್ಲ ತನ್ನ ಅಂಜುಬುರುಕ ಮನಸ್ಸಿನ ಭಾಸವೇ ಇದ್ದರೆ? ಆ ಮೊದಲಿನ ಚೀಟಿಯು ತಲೆದಿಂಬಿನ ಹತ್ತಿರವೇ ಬಿದ್ದಿತ್ತು. ಭಾಸವೆಂತಹದು?

ಅವಳ ಕಾಲುಗಳು ಥರಥರ ನಡುಗುತ್ತಿದ್ದವು. ಎದೆಯಲ್ಲಿ ಧಡ ಧಡ ನಡೆದಿತ್ತು. ಆದರೆ ಜೀವದ ಹಂಗುತೊರೆದ ಹರಿಣಿಯು ಬೇಟೆ ಗಾರನ ಮೇಲೆ ತಿರುಗಿ ಬಿದ್ದು ಇರಿಯುವಂತೆ, ಅವಳು ಕೋಣೆಯ ಬಾಗಿಲಿಗೆ ಚಿಲಕವನ್ನು ಹಾಕಿ, ಆ ಕಿಡಿಕಿಯ ಕಡೆಗೆ ಹೋಗಿ ಅದನ್ನು ತೆರೆದಳು. ಹೊರಗಿನ ವ್ಯಕ್ತಿಯು ಹೆಸರುಗೊಂಡು ಕರೆದ 'ತುಳಸೀ—'

ಹೊರಗಿನ ತಣ್ಣಗಿನ ಗಾಳಿಯಿಂದ ಅವಳ ದೇಹವೂ, ಆ ಶಬ್ದದಿಂದ ಅವಳ ಹೃದಯವೂ ನಡುಗಹತ್ತಿದವು.

'ತುಳಸೀ—'

'ತುಳಸಿಯು ಸತ್ತಳು!' ಗೋಡೆಗೆ ಅನುತ್ತಾನುತ್ತ ಅವಳು ಉತ್ತರ ಕೊಟ್ಟಳು.

'ಯಾರು ಕೊಂದರು?'

'ಸಾವಳ! ಅವಳ ಗಂಡ!'

'ಯಾತರಿಂದ?'

'ಉಪವಾಸದಿಂದ'

'ತುಳಸೀ, ಇದು ನಾಟಕವಲ್ಲ!'

ಸುರಂಗೆಯು ಹುಚ್ಚು ಹಿಡಿದವಳಂತೆ ಪಕಟಹಾಸ್ಯ ಮಾಡಿದಳು.

'ತುಳಸೀ, ನಾ ನಿನ್ನ ಗಂಡ!'

'ಹೋದ ಜನ್ಮದಲ್ಲಿ ಇರಬಹುದು'

'ಹ್ವಾದ ಜಲ್ಮದವ ಅಲ್ಲ. ಈ ಜಲ್ಮದವನs'

ಸುರಂಗೆಯು ಗೋಣಿನಿಂದಲೇ ಅಲ್ಲಗಳೆದಳು.

'ಈ ಜಲ್ಮದವ ಯಾಕ ಆಲ್ಲಾ?'

'ಗಂಡಹೆಂಡಿರ ಜಾತಿ ಒಂದೇ ಇರಬೇಕಾಗತದೆ!'

'ನೀ ನನ್ನ ಜಾತಿಯಾಕಿ ಅಲ್ಲೇನು?'

'ಉಂ ಹುಂ'

'ಅದೆಂಗ?'

'ನೀನು ಒಕ್ಕಲಿಗ–ನೀನು ಸೆರೆಕುಡಕ! ನಾನು–ನಾನು—'

ಸುರಂಗೆಯ ಕಣ್ಣುಗಳ ಮುಂದೆ ಹತ್ತು ವರುಷಗಳ ಹಿಂದಿನ, ಮತ್ತು ಇಂದಿನ ಜೀವನದ ಚಿತ್ರಗಳು ನಿಂತವು. ಆಗ ತಾನು ತೆಂಗಿನ ಗಿಡಕ್ಕೆ ಹಾಕುವ ಸಲುವಾಗಿ ಸೆಗಣಿಯ ಬುಟ್ಟಿಗಳನ್ನು ತಲೆಯಮೇಲೆ ಹೊತ್ತುಕೊಂಡು ಹೋಗುತ್ತಿದ್ದಳು. ಈಗ ಸುಂದರ ಸುಗಂಧದ ಹೂವಿನ ಹೊರತಾಗಿ ಮತ್ತೆ ಯಾತಕ್ಕೂ ತನ್ನ ತಲೆಯಮೇಲೆ ಕೂಡ ಲಿಕ್ಕೆ ಅಧಿಕಾರವಿಲ್ಲ. ಆಗ್ಗೆ ಒಕ್ಕಲಗಿತ್ತಿಗೆ ಸಿಗುತ್ತಿದ್ದ ಆ ಹರಕು ಬಟ್ಟೆ ಗಳಾದರೆ ಈಗ ಹೊಸಹೊಸ ಜರದ ಪತ್ತಲಗಳು. ಆಗ್ಗೆ ಮಂದಿಯ ಮನೆಯಲ್ಲಿ ಮುಸುರಿ ತಿಕ್ಕುವಾಗ ಹೊಲಸು ಪಾತ್ರೆಗಳ ಮೇಲೆ ಕೈ ಆಡುತ್ತಿದ್ದವಾದರೆ, ಈಗ ಸತಾರಿನ ತಂತಿಗಳಮೇಲೆ ಬೆರಳುಗಳು ನರ್ತಿ ಸುತ್ತಿವೆ,—ತನ್ನ ಜಾತಿಯೂ ಬದಲಾಯಿಸಿತೆಂದೇ ಇವೆಲ್ಲವುಗಳಲ್ಲಿ ಇಷ್ಟೊಂದು ಅಂತರವಾಯಿತು.

'ನಿನ್ನ ಚಾಲ್ ಯಾವದು?' ಕಿಡಿಕಿಯ ಮುಂದೆ ಬಂದು ಕೇಳಿ ದನು. ಈ ಎರಡೂ ಚಿತ್ರಗಳು ಸರ್ರನೆ ಅವಳ ಕಣ್ಣು ಮುಂದೆ ಹಾಯ್ದು ಹೋದವೆಂತಲೆ ಅವಳಿಗೆ ಉತ್ತರವು ಸೂಚಿಸಿತೇನೋ, ಅವಳು ಹೇಳಿದಳು 'ಬಿಳಿಯಂಗಿಯವರದು'

ಕಿಡಿಕಿಯ ಕಬ್ಬಿಣ ಸಲಾಖಿಗಳನ್ನು ಹಿಡಿದುಕೊಂಡು ಸಾವಳನು

ನಿಂತುಕೊಂಡನು. ಅಲ್ಲಿಂದ ಆತನಿಗೆ ಕೋಣೆಯ ಅರ್ಧ ಭಾಗವಾದರೂ ಕಾಣುತ್ತಿತ್ತು. ತರತರದ ಖುರ್ಚಿಗಳು, ಸಕ್ಸಿಯ ಪಲ್ಲಂಗ, ತೆಳ್ಳಗಿನ ಮುಚ್ಚರದಾನಿ, ಸುಂದರವಾದ ದಿಂಬುಗಳು, ಬೆಳ್ಳಿಯ ಪೀಕದಾನಿ, ಗೋಡೆಯಮೇಲಿನ ಸುಂದರವಾದ ಚೌಕಟ್ಟಿನಲ್ಲಿ ಕೂಡಿಸಿದ ಭಾವಚಿತ್ರ ಗಳು, ಆಚೆಗೆ ಬಿದ್ದುಕೊಂಡಿರುವ ತಂಬೂರಿ—ಸುರಂಗೆಯು ಇರುವ ಕೋಣೆಯು ಈ ತರದ್ದು ಇತ್ತು. ಅವನು ಹಿಂದಿರುಗಿ ನೋಡಿದ—ಅಪಾರವಾದ ಇಡೀ ಜಗತ್ತೇ ತನ್ನ ಇರುವ ಕೋಣೆ! ಅಲ್ಲಿಯ ಕಲ್ಲು ಗಳ ದಿಂಬುಗಳು ತನ್ನ ದಾರೀ ನೋಡುತ್ತಲಿವೆ. ಮರುಭೂಮಿಯಲ್ಲಿಯ ಮಣ್ಣೇ ರತ್ನಗಂಬಳಿಯಾಗಿ ಯಾವಾಗಲೂ ತನ್ನ ಸಲುವಾಗಿ ಪಸರಿಸಿದೆ ಎಂದೆನಿಸಿತು. ನಿಂದಿಯ ಅಂಗಡಿಯಲ್ಲಿ ಕಂಡುಬರುವ ಮುಖಚಿತ್ರಗಳೇ ತನ್ನ ಸುಂದರ ಫೋಟೋಗಳು, ಮತ್ತು ರಾತ್ರಿಯ ಕ್ರಿಮಿಗಳ ಕಿರ್ ಎಂಬ ಸಪ್ಪಳವೇ ತನ್ನ ಸತಾರಿನ ಸುಮಧುರ ಸ್ವರ!

ಸಾವಳನಿಗೆ ಕ್ಷಣಮಾತ್ರ ಬಹಳ ಕಂಗೆಟ್ಟಂತೆ ಆಯಿತು. ಒಮ್ಮೆಲೆ ಅವನು ಎಚ್ಚತ್ತು ಅವಳಿಗೆ ಅಂದನು—'ನೀ ಮತ್ತೆ ಒಕ್ಕಲಿಗರ ಜ್ಯಾತ್ಯಾಗ ಬಾ.'

ಸುರಂಗೆಯು ಕಲ್ಲಿನ ಪುತ್ಥಳಿಯಂತೆ ಸ್ತಬ್ಧಳಾಗಿ ನಿಂತಿದ್ದಳು. ಅವನು ತನ್ನ ಕಡೆಗೆ ದಿಟ್ಟಿಸಿ ನೋಡುತ್ತಿರುವನೆಂದು ತಿಳಿದ ಕೂಡಲೆ ಅವಳು ಅಂದಳು—'ಸುರಂಗಿಯ ಗಿಡ ತುಳಿಸಿಯ ಗಿಡ ಆಗುವದು ಶಕ್ಯವಿಲ್ಲ'

'ತುಳಸೀ ಗಿಡದ್ದು ಸುರಂಗಿ ಗಿಡ ಹ್ಯಾಂಗ ಆತು?'

'ಅದು ಆಗಲಿಲ್ಲ. ಅದನ್ನು ಸುರಂಗಿಯಾಗಿ ಮಾಡಿದರು!'

'ಯಾರು?'

'ಒಬ್ಬ ಶ್ರೀಮಂತರು' ಸುರಂಗೆಯೂ ನಡುಗುತ್ತ ನಡುಗುತ್ತ ಉತ್ತರ ಕೊಟ್ಟಳು.

ಸಾವಳನ ಕಣ್ಣುಗಳಲ್ಲಿ ಕೆಂಪು ಕೆಂಡಗಳೇ ಹೊಳೆಯಲಾರಂಭಿಸಿ ದವು. ತನ್ನನ್ನು ಸಾವರಿಸಿಕೊಳ್ಳುವ ಪ್ರಯತ್ನ ಮಾಡುತ್ತ ಸುರಂಗೆಯು ಅಂದಳು.

'ಸಾವಳ, ನಿನಗೆ ಬೇಡಿಕೊಳ್ಳುವೆ. ನಿನ್ನ ಕಾಲು ಬೀಳುವೆ. ಕೊಲ್ಲಬೇಡ ನನ್ನನ್ನು!'

'ನಿನ್ನ ಕೊಲ್ಲೂದಿಲ್ಲ—'

'ಅಂದರೆ ಯಾರನ್ನು?' ರಮಾಕಾಂತನನ್ನು ಆಗಲೇ ಅವನು ಕೋಣೆಯಲ್ಲಿ ನೋಡಿರಬಹುದೆಂಬ ಸಂಶಯದಿಂದ ಕೇಳಿದಳು.

'ಆ ಶ್ರೀಮಂತನ್ನ'

'ಬೇಡ, ಇಂಥ ಗೊಂದಲದಲ್ಲಿ ಬೀಳಬೇಡ! ಎಲ್ಲಿಯಾದರೂ ಸುಖದಿಂದ ಇರು! ನಿನಗೆ ಬೇಕಾದಷ್ಟು ಹಣವನ್ನು ಕೊಡುವೆ!'

'ಅದನ್ನಽ ಬೇಡಲಿಕ್ಕೆ ಬಂದೆ ನಾ ಮುಂಬಯಿಯಿಂದ'

'ಹೋದಸಾರೆಯವು ತೀರಿದವೇನು ಇಷ್ಟರಲ್ಲಿ?'

'ಹೌದು'

'ಯಾತರಲ್ಲಿ?'

'ಇಲ್ಲಿ ಉರಿ ಆರಸೂದರಾಗ—' ಎಂದು ತನ್ನ ಎದೆಯ ಮೇಲೆ ಕೈ ಇಡುತ್ತ ಸಾವಳನು ಉತ್ತರ ಕೊಟ್ಟನು.

ಸುರಂಗೆಯು ಗೋಡೆಯ ಮೇಲಿನ ಕೈ ತೆಗೆದು ಕಿಡಿಕಿಯ ಸಲಾಕೆಯ ಮೇಲೆ ಇಟ್ಟಳು. ಸಾವಳನ ಕೈಯು ಅದೇ ಸಲಾಕಿಯ ಕೆಳಗಿನ ಭಾಗದಲ್ಲಿ ಇತ್ತು. ಅವರಿಬ್ಬರ ಕೈಗಳಲ್ಲಿ ಏನೂ ಅಂತರವಿರಲೇ ಇಲ್ಲ. ಆದರೆ ಆ ಕಿಡಿಕಿ—ಅದರೊಳಗಿಂದ ಅವಳಿಗೆ ಹೊರಗೆ ಹೋಗುವದು ಶಕ್ಯವಿರಲಿಲ್ಲ—ಸಾವಳನಿಗೆ ಒಳಗೆ ಬರುವದೂ ಶಕ್ಯವಿರಲಿಲ್ಲ. ಕಳೆದ ಹತ್ತು ವರ್ಷಗಳಲ್ಲಿ ತಮ್ಮಿಬ್ಬರ ನಡುವೆ ಗಟ್ಟಿಯಾದ ಕಬ್ಬಿಣ ಸಲಾಕಿಯ ಕಿಡಿಕಿಯನ್ನೇ ಕೂಡಿಸಿದ್ದಾರೆಂದು ಸಾವಳನಿಗೆ ನಂಬಿಗೆಯಾಯಿತು.

ಆಕಳಿಸುತ್ತ ಅವನು ಅಂದನು—'ರೊಕ್ಕ!' ಆತನ ಆಕಳಿಕೆಯ ಕೂಡ ಸೆರೆಯ ಉಗ್ರವಾಸನೆಯು ಕಿಡಿಕಿಯೊಳಗಿಂದ ಒಳಗೆ ಬಂದಿತು. ಸುರಂಗೆಯು ಪಲ್ಲಂಗದ ಕಡೆಗೆ ಹೋಗಿ ಅದರ ಕೆಳಗಿನ ಟ್ರಂಕನ್ನು ಮುಂದಕ್ಕೆ ಎಳೆದುಕೊಂಡು, ಅದರೊಳಗಿಂದ, ೫ ರೂಪಾಯಿಯ ೧೦ ನೋಟುಗಳನ್ನು ತೆಗೆದುಕೊಂಡು ಕಿಡಿಕಿಯ ಕಡೆಗೆ ಬಂದಳು.

'ಎಷ್ಟು ಅವs?'

'ಐವತ್ತು!'

'ಐವತ್ತೇ? ಹುಂ. ನಾನು ಮತ್ತೆ ಲಗೂನs ಬಂದು ಭೆಟ್ಟಿ ಆಗ ಬೇಕು. ಅಂತs ಇಷ್ಟು ಕೊಟ್ಟೆ. ಹೌದ? ಹಾಂ. ಮರಿತಿದ್ದೆ ನೋಡು. ಆ ಶ್ರೀಮಂತನ ಹೆಸರು—'

'ಸಾವಳ, ನಿನಗೆ ನನ್ನ ಕೊರಳ ಆಣೆ!'

'ಆ ನಿನ್ನ ರಮಾಕಾಂತಗೆ ಹಾಕು ನಿನ್ನ ಆಣೀನs! ನಾ ಯೋಳು ವರುಷ ಜೇಲಿಗೆ ಹೋಗಿ ಬಂದೀನಿ–ಇನ್ನು ಏಳು ವರ್ಷ ಹೋಗತೀನಿ-ಪಾಶಿ ಹೋಗತೀನಿ!—'

ಅರ್ಧ ಬಡಬಡಿಸುತ್ತ ಸಾವಳನು ಹೊರಟು ಹೋದ. ತನ್ನ ಕೋಣೆಯ ಬಾಗಿಲ ತೆರೆದು ಸುರಂಗೆಯು ರಮಾಕಾಂತನೆಲ್ಲಿರಬಹು ದೆಂದು ನೋಡಿದಳು. ಅವನು ಬಹುತರವಾಗಿ ಎಚ್ಚರ ಇರಲಿಕ್ಕಿಲ್ಲ. ಅವಳು ತಿರುಗಿ ಕೋಣೆಯಲ್ಲಿ ಬಂದು ಬಾಗಿಲವನ್ನಿಕ್ಕಿಕೊಂಡು ಗಳಗಳ ಅಳತೊಡಗಿದಳು.

* * * *

ಜೇಲಿನೊಳಗಿಂದ ಹೊರಬಿದ್ದನಂತರ ಸಾವಳನ ಒಂದು ಕೈಯನ್ನು ಬಾಪ್ಪಾ ಇವರು ಮಿತ್ರನಂತೆಯೂ ಎರಡನೇ ಕೈಯನ್ನು ಸುರಂಗೆಯು ಹೆಂಡತಿಯಂತೆಯೂ ಹಿಡಿದುಕೊಂಡು ಹೋಗಿದ್ದರೆ ಆತನು ಮತ್ತೆ ಹೆಂಡದ ಅಂಗಡಿಯ ಕಡೆಗೆ ಹೋಗದೆ ಇರಬಹುದಾಗಿತ್ತು. ಆದರೆ ಇವನು ಜೇಲಿನಿಂದ ಹೊರಬಿದ್ದಾಗಿನಿಂದ ಬಾಪ್ಪಾ ಅವರು ತಮ್ಮ ವ್ಯಾಪಾರದಲ್ಲಿಯೇ ಸುತ್ತಿಕೊಂಡಿದ್ದರು. ರಾಜಕಾರಣದ ಕೊಳೆತ ಆಟಕ್ಕೆ ಅವರು ಹೇಸಲಿಲ್ಲ. ಹಾಗೆ ಆಗುವದು ಶಕ್ಯವೇ ಇರಲಿಲ್ಲ. ಯಾಕಂದರೆ ಅವರ ಮೂಗು ಗಾಂಧಿಜಿಯವರ ಕೈಯಲ್ಲಿ ಸಿಕ್ಕಿತ್ತು. ಗಾಂಧಿಯವರು ಅಂಥ ಹೊಲಸು ತಿಳಿದು ಅಲುಗಾಡಿದರೆ ಅವರ ಕೈಯೊಳಗಿದ್ದ ಬಾಪ್ಪಾ ಅವರ ಮೂಗು ಅಲುಗಾಡಬೇಕು; ಅವರು ಜೇಲಿನಿಂದ ಹೊರಬೀಳು ವಾಗ, ಮೊದಲು ಮುಂಬಯಿಗೆ ಹೋಗತಕ್ಕದ್ದು. ತಂಗಿಗೂ ಸುಲೋ ಚನೆಗೂ ಭೆಟ್ಟಿಯಾಗಿ, ಸ್ವಾತಂತ್ರ್ಯದಿನದ ವೇಳೆಗೆ ಕಾಯದೇಭಂಗ ಮಾಡಿ

ನುತ್ತ್ತಿ ಜೇಲು ಸೇರತಕ್ಕದ್ದು ಎಂಬ ಕಾರ್ಯಕ್ರಮವನ್ನು ತಮ್ಮ ಮುಂದೆ ಇಟ್ಟುಕೊಂಡಿದ್ದರು. ಆದರೆ ಅವರು ಮುಂಬಯಿಗೆ ಬಂದ ಕೂಡಲೆ ಕಳೆದ ಮಳೆಗಾಲದಲ್ಲಿ ಮಹಾಪೂರಗಳಿಂದ ಕೊಂಕಣದಲ್ಲಿ ಆದ ಅನರ್ಥದ ಸವಿಸ್ತರವಾದ ವೃತ್ತಾಂತವು ಅವರ ಕಿವಿಗೆ ಬಿದ್ದಿತು. ಕೊಂಕಣವು ಅವರಿಗೆ ಜನ್ಮಭೂಮಿಯೂ, ಕರ್ಮಭೂಮಿಯೂ ಆಗಿದ್ದರಿಂದ ಅದರ ಮೇಲೆ ಅಷ್ಟೊಂದು ಅವರ ಪ್ರೇಮವಿತ್ತು. ಅಲ್ಲಿಯ ಸ್ಥಿತಿಯನ್ನು ಪ್ರತ್ಯಕ್ಷವಾಗಿ ನೋಡಿಕೊಂಡೇ ಜೇಲಿಗೆ ಹೋಗಬೇಕೆಂದು ಅವರು ಕೊಂಕಣದಲ್ಲಿ ಬಂದರು. ಪ್ರತಿವೂರಲ್ಲಿಯೂ ಅವರ ಸ್ವಾಗತವಾಯಿತು. ಸಭೆಗಳೂ ಆದವು. ಕೊಂಕಣ ರಿಲೀಫಫಂಡು ತನ್ನ ಕೆಲಸವನ್ನು ಚನ್ನಾಗಿ ಮಾಡಿದ್ದನ್ನು ಅವರು ಕಂಡುಹಿಡಿದರು. ಆದರೆ ಕಾಯದೇಭಂಗದ ಕೆರೆಗಳು ಮಾತ್ರ ಸುಮ್ಮನೆ ಹಾಯ್ದುಹೋದದ್ದನ್ನು ನೋಡಿ ಅವರ ಮನಸ್ಸು ಉದ್ವಿಗ್ನವಾಯಿತು. ಮೂರು ವರುಷದ ಪೂರ್ವದಲ್ಲಿ ಯಾವ ಊರಲ್ಲಿ ಮೂರು ಸಾವಿರ ಟಕಳಿಗಳು ನೂಲುತ್ತಿದ್ದವೋ ಅದೇ ಊರಲ್ಲಿ ಔಷಧ ಮಾತ್ರಕ್ಕಾದರೂ ಒಂದೂ ಇಲ್ಲ!

ನೂಲಲಿಕ್ಕೆ ರಾಟಿಯು ಮುಂದೆ ಕೂಡುವದೆಂದರೆ ಹೊಟ್ಟೆಯು ಮೇಲೆ ಕೂಡುವಷ್ಟು ಸುಲಭವೆಂದು ತಿಳಿದು ಚಳವಳಿಯಲ್ಲಿ ಬಿದ್ದ ವಿಲಾಸಿ ಹಾಗೂ ನಿರುದ್ಯೋಗಿಗಳಾದ ಬಿಳಿಯಂಗಿಯ ಹುಡುಗರೂ, ದೊಡ್ಡಿಸ್ತ ನಕ್ಕೆ ಹವಾಪಿಸಿದ ಹಿರಿಯರೂ ಆರ್ಡಿನನ್ಸ ದೊಡ್ಡ ಗುಂಡುಕಲ್ಲು ಕಂಡ ಕೂಡಲೆ ಎತ್ತಲೋ ಅಡಗಿ ಕುಳಿತಿದ್ದರು.

ಬಡವರು ಬೆವರು ಸುರಿಸುತ್ತಿದ್ದರು; ಸೆರೆಯನ್ನು ಕುಡಿಯುತ್ತಿದ್ದರು. ಶ್ರೀಮಂತರು ಗಾದಿಗಳಲ್ಲಿ ಹೊರಳಾಡುತ್ತಿದ್ದರು, ಸಭ್ಯರು ಜೂಜು ಆಡುತ್ತಿದ್ದರು. ಕಾವಾಪುರದ ಕಾರಖಾನೆಯಲ್ಲಿ ದಾದಾ ಅವರು ಕೂಲಿಯ ದರವನ್ನು ಕಡಿಮೆ ಮಾಡುವರೆಂಬುದು ತಿಳಿದಕೂಡಲೆ ಬಾಪ್ಪಾ ಅವರು ಅತ್ತ ಕಡೆಗೆ ಹೋಗುವವರಿದ್ದರು. ಆದರೆ ಹೀಗೆ ತಿರುಗಾಡುವ ದರಲ್ಲಿಯೇ ಅವರ ವೇಳೆಯೆಲ್ಲ ಹೋಯಿತು. ಪ್ರತಿಯೊಂದು ಊರು ಬಿಡುವಾಗ ಅವರ ಮನಸ್ಸಿನಲ್ಲಿ ನಿರಾಶೆಯು ನರಿಯು ಕೂಗಿನಂತೆ ಈ ಕೆಳಗಿನ ಎರಡು ಪದ್ಯದಲ್ಲಿ ವರ್ಣಿಸಿದಂತೆ ಆಕ್ರೋಶಿಸುತ್ತಿತ್ತು.

ಎದೆಯ ಮೇಲೆ ಕೈಯನಿಟ್ಟು ಎದೆಯ ನೋವ ಕಳೆಯಬಹುದೆ?
ಕಡಲಿನಲ್ಲಿ ಎಲ್ಲ ಕಡೆಗು ನೀರು ಕುಡಿಯಲೇನು ಇಹುದೆ?

ಇಂಥ ಸ್ಥಿತಿಯಲ್ಲಿ ಸಾವಳನು ಜೇಲಿನಿಂದ ಎಂದು ಹೊರಬೀಳುವ ನೆಂಬುದು ಅವರಿಗೆ ನೆನಪಿನಲ್ಲಿ ಉಳಿಯುವದು ಹೇಗೆ? ರತ್ನಾಗಿರಿಯ ಚಹದ ಅಂಗಡಿಯ ಹುಡುಗನಕೂಡ ಬಡಿದಾಡಿದನಂತರ ಅವನು ನೆಟ್ಟಗೆ ಮುಂಬಯಿಗೆ ಬಂದನು. ಅವನು ಬಂದದ್ದೆಂದರೆ ರಮಾಕಾಂತನ ನಾಟಕದ ರಂಗತಾಲೀಮಿನ ದಿವಸವೇ. ಆಹೊತ್ತಿನ ದಿವಸ ಅವನಿಗೆ ಸುರಂಗೆಯ ಭೆಟ್ಟಿಯಾಗುವದಂತೂ ಶಕ್ಯವಿರಲಿಲ್ಲ. ಎಷ್ಟೋ ವೇಳೆ ಅವನು ಹೊರಗೆ ಹಾಗೇ ದಾರೀ ನೋಡುತ್ತ ಕುಳಿತನು. ಕಡೆಗೆ ಅವನಿಗೆ ದೂರಿನಿಂದಲೇ ಸುರಂಗೆಯು ಮೋಟಾರಿನಲ್ಲಿ ಕೂಡುವದು ಕಾಣಿಸಿತು. ಅವಳ ನಗೆ, ಅವಳ ವೇಷ, ಅವಳ ಬಯ್ಯಾರ–ಬಂದು ಕ್ಷಣ ದಲ್ಲಿಯೇ ಸಾವಳನಿಗೆ, ಅವಳ ಮತ್ತು ತನ್ನ ನಡುವೆ ಏಳು ವರುಷಗಳಷ್ಟೇ ಅಲ್ಲ, ಸಪ್ತಸಮುದ್ರದಷ್ಟು ಅಂತರವುಂಟಾಗಿದೆ ಎಂದು ತಿಳಿದುಹೋ ಯಿತು. ಒಂದೇ ತೆಂಗಿನಮರದಿಂದ ತೆಂಗಿನ ಹಾಲು ಸೆರೆಯೂ ಹೊರಡು ವವು. ಆದರೆ ಸೆರೆಯಿಂದ ಹಾಲನ್ನು ಉಂಟುಮಾಡಬಹುದೆ? ಇಷ್ಟೊಂದು ಒನಪು-ಬಯ್ಯಾರಗಳಲ್ಲಿ ಆಯುಷ್ಯಕಳೆಯುವ ಸುರಂಗೆಯೂ ಮತ್ತೆ ಮೊದಲಿನಂತೆ ಗೋಡಂಬೆಗಳನ್ನು ಒಡೆಯಲಿಕ್ಕಾಗಲಿ, ನೆಗಣಿಯ ಬುಟ್ಟಿ ಗಳನ್ನು ಹೊರಲಿಕ್ಕಾಗಲಿ, ಹೊಲದಲ್ಲಿ ನಾಟಿಗಳನ್ನು ಹಚ್ಚುವದಕ್ಕಾಗಲಿ ಬರಬಹುದೆ? ಛೇ! ಪಾತರಗಿತ್ತಿಯು ಹೊಟ್ಟೆಗಿಲ್ಲದೆ ಸಾಯಬಹುದು; ಆದರೆ ನೆಗಣಿಯೊಳಗಿನ ಹುಳವಾಗಿ ಬದುಕಲಿಕ್ಕಿಲ್ಲ.

ಕ್ಷಣಾರ್ಧದಲ್ಲಿಯೇ ಆಶಾತಂತುವು ಹರಿದು, ಸಾವಳನು ವ್ಯಸನದ ಕಂದರದಲ್ಲಿ ಪುನಃ ಹೋಗಿ ಬಿದ್ದನು. ಅದೇ ರಾತ್ರಿಯೇ ಅವನು ತನ್ನ ಗುರುತಿನ ಹೆಂಡದ ಅಂಗಡಿಗೆ ಹೋಗಿ ತನ್ನ ಮೊದಲಿನ ಮಿತ್ರರೊಂದಿಗೆ ಕೂಡಿಕೊಂಡು, ಇತಿಹಾಸದ ಪುನರಾವೃತ್ತಿಯನ್ನು ಆರಂಭಮಾಡಿ ದನು. ಆದರೆ ಈ ಆವೃತ್ತಿಯು ಕೆಡಿಸಿ ಬೆಳಿಸಿದ್ದಾಗಿತ್ತೆಂಬುದೊಂದೇ ದುರ್ದೈವದ ಮಾತು.

ಮರುದಿವಸ ನಾಟಕಕ್ಕೆ ಅವನು ಬೇಕಂತಲೇ ಟಿಕೀಟು ಕೊಂಡು ಕೊಂಡು ಹೋದನು. ಆತನ ಹತ್ತಿರವೇ ಕುಳಿತ ಒಬ್ಬ ಪ್ರೇಕ್ಷಕನು ಸುರಂಗೆಯನ್ನು ಕಂಡು ಲಟಕಿ ಹೊಡೆಯುತ್ತಿದಕೂಡಲೇ ಆತನಕೂಡ ಇವನು ಜಗಳಕ್ಕೆದ್ದನು. ಬಡಿದಾಟ ಆರಂಭವಾಯಿತು. ಬಾಯಿಯಲ್ಲಿ ಹೆಂಡದ ಹೊಲಸು ಇಡುಗಿತ್ತು. ಪೋಲೀಸರು ಸೆರೆಗುಡಕನೆಂದು ಆತ ನನ್ನು ಥೇಟರಿನ ಹೊರಗೆ ತಳ್ಳಿದರು.

ಎರಡನೇ ದಿವಸ ಅವನು ಸುರಂಗೆಯು ದೂರಿನ ಅಪ್ಪನೆಂದು ಅವ ಳಿಗೆ ಭೆಟ್ಟಿಯಾಗಲಿಕ್ಕೆ ಹೋದನು. ಆತನ ಬಾಯಿಯಿಂದ ಹೆಂಡದ ನಾತ ಬರುತ್ತಿತ್ತು. ಆತನ ದೃಷ್ಟಿಯಲ್ಲಿ ಕ್ರೂರತನವು ಸಂಚರಿಸಿತ್ತು. ಆದದ್ದರ ಬಗ್ಗೆ ಕ್ಷಮೆ ಬೇಡುವದಂತೂ ದೂರವೇ ಉಳಿಯಿತು. 'ಕಾಮೂಪುರದ ಕೋಣನಂತೆ ನಿನ್ನನ್ನು ತುಂಡು ಮಾಡುವೆ' ಎಂದು ಅವಳಿಗೆ ಅಂಜಿಸುವದಕ್ಕೆಕೂಡ ಅವನು ಹಿಂಜರಿಯಲಿಲ್ಲ. ಅಂಥ ವಿಷವನ್ನೇ ಅವನ ಕಿವಿಗಳಲ್ಲಿ ಆತನ ಮಿತ್ರರು ಸುರುವಿದ್ದರು. ಚಿಲ್ಲರೆ ಜನರೆಲ್ಲರೂ ಮ್ಯಾನೇಜರ ಮತ್ತು ಸುರಂಗೆ ಇವರಿಬ್ಬರ ವಿಷಯದಲ್ಲಿ ಇಲ್ಲದ ಸಲ್ಲದ ಸಂಗತಿಗಳನ್ನೆಲ್ಲ ಉಪ್ಪುಕಾರ ಹಚ್ಚಿ ಹೇಳಿದ್ದರು. ಇದಲ್ಲದೆ ಸುರಂಗೆಯೇ ಅವನ ಕೂಡ ಇರಲಿಕ್ಕೆ ಅಲ್ಲಗಳೆದಿದ್ದಳು.

ಕಳೆದ ಆರೇಳು ವರುಷಗಳಲ್ಲಿ ಅವಳ ಆಯುಷ್ಯವು ವಿಷ ಆರಾಮು ದಲ್ಲಿಯೂ ನಾಜೂಕು ನಟನೆಯಲ್ಲಿಯೂ ಹೋಗಿದ್ದರಿಂದ ಸಾವಳನು ತನ್ನ ಗಂಡನೆಂದು ತೋರಗೊಡುವದಕ್ಕಿಂತ ಜೀವ ಕೊಡುವದು ಬೇಕೆಂದು ಅವಳಿಗೆ ತೋರಿತು. ಇಂಥ ಉದ್ಗಾರಕ್ಕೆ ಸಾವಳನು ಅವಳ ಕುತ್ತಿಗೆಯನ್ನು ಹಿಸುಕಿಯೇ ಅವಳಿಗೆ ಉತ್ತರ ಕೊಡಬಹುದಾಗಿತ್ತು. ಆದರೆ ಸುರಂಗೆಯು ಅಂಜಿ ಒದರಿದರೆ ನಾಟಕದಲ್ಲಿಯ ಜನರು ಬರಬಹುದೆಂದೂ ಅಲ್ಲದೆ ಆತನ ಮಿತ್ರರು ಅವನಿಗೆ ಒಂದು ಕಿವಿಮಂತ್ರ ವನ್ನು ಊದಿ ಕಳಿಸಿದ್ದರಿಂದ ಅವನು ಸುಮ್ಮನಿದ್ದನು. ಸುರಂಗೆಯು ತನ್ನಕೂಡ ಇರಲಿಕ್ಕೆ ಬರದಿದ್ದರೆ, ಅಂಜಿಯಾದರೂ ತನಗೆ ಮೇಲಿಂದ ಮೇಲೆ ಹಣವನ್ನು ಕೊಡುವಳೆಂಬುದು ಅವನಿಗೆ ನಂಬಿಗೆಯಾಯಿತು.

ತಾನು ಬಾಯಿ ಮುಚ್ಚಲಿಕ್ಕೆ ಒಪ್ಪಿಸಕೂಡಲೆ ಅವಳು ನೂರು ರೂಪಾಯಿ ತೆಗೆದು ಕೈಯಲ್ಲಿಟ್ಟಳು. ಹೋಗುಹೋಗುವ ಮುಂದೆ ಏನಾದರೊಂದು ಒಳ್ಳೇ ಉದ್ಯೋಗ ಮಾಡಬೇಕೆಂದು ಅವಳು ಆವನಿಗೆ ಸೂಚಿಸಿದ್ದಳು. ಆದರೆ ಅವನು 'ನನಗ ಯಾಕ ಬೇಕು ಧಂದೆ? ನಿನ್ನ ಜೀವದ ಮ್ಯಾಗ–' ಎಂದು ವಿಕಟ ಹಾಸ್ಯ ಮಾಡುತ್ತ 'ರೊಕ್ಕ ಇಲ್ಲ ಅನ್ನಲಾ—ಕಾಮಾ ಪುರದ ಜಾತ್ರೀSSS' ಎಂದಿದ್ದನು.

ಈ ಶಬ್ದಗಳ ಉಚ್ಚಾರದ ಕೂಡ ಸಾವಳನು ಮಾಡಿದ ವಿಕಟವಾದ ಹಾವಭಾವಗಳ ಮೂಲಕ, ಅವನು ಹಾದಿಗೆ ಹೋಗಿ ಕೂಡುವಷ್ಟರಲ್ಲಿಯೆ ಸುರಂಗೆಯು ಮೂರ್ಛಿತಳಾಗಿ ಬಿದ್ದಳು. ಮುಂಬಯಿಯಂಥ ಪಟ್ಟಣ ದಲ್ಲಿ ವ್ಯಸನೀ ಮನುಷ್ಯನ ನೂರು ರೂಪಾಯಿಗಳು ಚೂರು ಚೂರು ಆಗಲಿಕ್ಕೇನು ವರ್ಷಗಳು ಬೇಕೆ? ರೊಕ್ಕ ತೀರಿದಕೂಡಲೇ ಅವನು ಮತ್ತೆ ಕಂಪನಿಯ ಬಿಡಾರಕ್ಕೆ ಹೋದ. ಆದರೆ ಅವಳು ಹವೆಯನ್ನು ಬದಲಾಯಿಸುವದರ ಸಲುವಾಗಿ ಬೆಳಗಾವಿಗೆ ಹೋದ ಸಂಗತಿಯು ಅವ ನಿಗೆ ಒಬ್ಬ ನೌಕರನಿಂದ ತಿಳಿಯಿತು. ಅಲ್ಲಿಂದ ಬೆಳಗಾವಿಗೆ ಬಂದು, ಅವಳ ಬಂಗಲೆಯಲ್ಲಿ ಒಬ್ಬ ಸೇವಕನ ಗುರುತು ಮಾಡಿಕೊಂಡು ರಾತ್ರಿ ವೇಳೆಯಲ್ಲಿ ಮತ್ತೆ ಕಿಡಿಕಿಯ ಹತ್ತಿರ ಆವಳಿಗೆ ಗಂಟುಬಿದ್ದನು.

ಎರಡನೇ ದಿವಸ ಸಂಜೆಗೆ ಸಾವಳನು ಸುರಂಗೆಯ ಬಂಗಲೆಯ ಕಡೆಗೆ ಹೊರಟ. ಆತನ ಕಿಸೆಯಲ್ಲಿ ರೊಕ್ಕವಿದ್ದರೂ ಮನವು ಶೂನ್ಯ ವಾಗಿತ್ತು. ಕಳೆದ ರಾತ್ರಿಯಲ್ಲಿ ಸುರಂಗೆಯ ಮಾತುಗಳ ಮೇಲಿಂದ ಆತನ ಮನಸ್ಸಿನಲ್ಲಿ ಬೇರೆ ವಿಚಾರಗಳೇ ಬರತೊಡಗಿದವು. ಯಾವನಾದ ರೊಬ್ಬ ಶ್ರೀಮಂತನು ತುಳಸಿಗೆ ಮೋಸಮಾಡಿ ಮನೆಯ ಹೊರಗೆ ಕರೆ ದೊಯ್ದಿರಲಿಕ್ಕೆಬೇಕು. ಇಲ್ಲದಿದ್ದರೆ, ತನ್ನೊಡನೆ ಸಂಸಾರ ಮಾಡಲಿಕ್ಕೆ ಅವಳು ಎಂದಿಗೂ ಅಲ್ಲಗಳೆಯುತ್ತಿರಲಿಲ್ಲ. ಸಿರಿವಂತರ ಮೇಲೆ ಆತನದು ಎಷ್ಟೊಂದು ಸಿಟ್ಟು! ಬಡವರಿಗೆ ಬಕ್ಕರಿ ಕೊಡುವದಂತೂ ದೂರವೇ! ತಿರುಗಿ ಅವರ ಸುಖವನ್ನು ಮಣ್ಣುಗೂಡಿಸುವರು! ತುಳಸಿಯನ್ನು ಮನೆಯಿಂದ ಹೊರಗೆಳೆದ ಆ ಶ್ರೀಮಂತನ ಮೇಲೆ ಸೇಡು ತೀರಿಸಲೇ

ಬೇಕೆಂದು ಅವನಿಗೆ ಅನಿಸಿತು. ಆದರೆ ಅವನು ಯಾರೆಂಬುವದು ಹೇಗೆ ಗೊತ್ತಾಗಬೇಕು? ತಾನು ತನ್ನ ಊರಿಗೆ ಹೋದರೆ? ಅದಕ್ಕಿಂತಲೂ ತುಳಸಿಗೆ ಸ್ವಲ್ಪ ಅಂಜಿಸಿದರಾಯಿತು. ಅವನ ಮೇಲೆ ಸೇಡು ತೀರಿಸಿ ಕೊಂಡರೆ, ಅವಳಿಗಾದರೂ ಸ್ವಲ್ಪ ಆನಂದವಾಗಬಹುದು. ಸುರಂಗೆಯ ವಿಷಯದಲ್ಲಿ ಸಿರಾಶೆ ಮತ್ತು ಸೆರೆ ಕುಡಿಯಲಿಕ್ಕೆ ಸಾಕಷ್ಟು ಹಣ ಇವೇ ಆತನ ಸೇಡಿನ ಕಲ್ಪನೆಯ ಮೂಲಗಳಾಗಿದ್ದವು.

ಬಂಗಲೆಯ ಕಿಡಿಕಿಗಳೆಲ್ಲವೂ ಮುಚ್ಚಿದ್ದನ್ನು ನೋಡಿ ಆಶ್ಚರ್ಯ ವೆನಿಸಿತು. ನೌಕರರು ಇರುವ ಸ್ಥಳಗಳ ಕಡೆಗೆ ಹೋಗಿ ತನ್ನ ಮೊದಲನೇ ದಿವಸದ ಮಿತ್ರನನ್ನು ಕುರಿತು 'ಬಾಯಿಯವರು ಎಲ್ಲಿ ಹೋಗ್ಯಾರ?' ಎಂದು ವಿಚಾರಿಸಿದ.

'ಅಂಬೋಲಿಗೆ!'

'ಯಾತಕ್ಕೆ?'

'ನೋಡಲಿಕ್ಕೆ!'

'ಒಬ್ಬರs?'

'ರಾಧಾನ ಕೂಡ ಕೃಷ್ಣ ಇರಾವನs ಅಲ್ಲಪಾ!'

'ಎರಡನೇ ಗವಳಿಗೇರಾಕೀನೂ ಹೋಗ್ಯಾಳೇನ?' ಸಾವಳನು ಸಿರ್ಸಿಕಾರ ಮುದ್ರೆಯಿಂದ ಪ್ರಶ್ನೆಮಾಡಿದ.

'ಹೌದು. ಕೊಂಕಣದಾಗ ಐತಿ ಅಂತ ಆಕಿ ಮನಿ. ಕಾವಮೂರೋ ಘಾವಮೂರೋ ಅಂತಾರ ಅದಕ. ಅಲ್ಲಿ ಒಂದು ದೊಡ್ಡ ಜಾತ್ರಿ ಆಗತೈತಿ. ನನಗೂ ಐತಿ ಅಲ್ಲಿಗೆ ಔತನ.'

ಇಷ್ಟರಲ್ಲಿ ಬಂಗಲೆಯ ಮುಂದಿನ ಅಂಗಳದಲ್ಲಿ ಆಡುವ ಒಬ್ಬ ಹುಡುಗನ ಕಡೆಗೆ ಸಾವಳನ ಲಕ್ಷ್ಯವು ಹೋಯಿತು. ಆ ಹುಡುಗನ ಹತ್ತಿರವೇ ಒಬ್ಬ ಮುದುಕಿ ಕುಳಿತಿದ್ದಳು. ಸಾವಳನು ಕೇಳಿದ—

'ಈ ಹುಡುಗ ಯಾರದು ಇದೂs?'

'ದೇವರಿಗೇ ಗೊತ್ತು!'

ಸಾವಳನು ಸಂಶಯದ ದೃಷ್ಟಿಯಿಂದ ಅವನ ಕಡೆಗೆ ನೋಡಿದ.

ಅವನು ತನ್ನಿಂದ ಏನಾದರೂ ಬಚ್ಚಿಡಹತ್ತಿದ್ದಾನೆಂದು ಅವನಿಗೆ ಅನಿಸಿತು.

'ಯಾರ ಕಡೆ ಬಂದೈತಿ ಅದು?'

'ಬಾಯಿಯವರ ಕಡೆ'

'ಎಲ್ಲೀದ?'

'ಕೊಂಕಣದಿಂದ'

'ಮತ್ತ ಅವರರ ಅಂಬೋಲಿಗೆ ಹೋಗ್ಯಾರ!'

'ಯಾವದರ ಮುದುಕಿ ಒಂದು ಹುಡುಗನ ಕರಕೊಂಡು ಬಂದರ ಎಷ್ಟ ದಿವಸ ಇಟಗೊಳ್ಳಾಕ ಹೇಳ್ಯಾರ ಅವರು!'

'ಬಾಯವರಿಗೆ ಆ ಹುಡುಗನ ಕೂಡ ಏನ ಮಾಡೂದೈತಿ?'

'ಒಳ್ಳೇ ಹೇಳತೀ ನೀನೂs? ಮದಿವಿ ಆಗಿಲ್ಲಾ ಅಂದರ ಹುಡುಗೂರು ಬ್ಯಾಡ ಆಗತಾವ ಏನ ಯಾರಿಗಾರ s?'

ಕೈಯೊಳಗಿನ ಚಿಲುಮಿಯ ಮೇಲೆ ಕೆಂಡ ಇಡುತ್ತ ಅವನು ಉದ್ಗಾರ ತೆಗೆದ. ಕೂಡಲೆ ಒಂದು ಝುರಕಿ ಎಳೆದು ಮೂಗಿನೊಳಗಿಂದ ಹೊಗೆ ಹೊರಗೆ ಬಿಟ್ಟ. ಸಾವಳನ ಕೈಯೊಳಗೆ ಚಿಲಿಮೆ ಕೊಡಬೇಕೆಂದು ಕೈ ಮುಂದೆ ಮಾಡುವಷ್ಟರಲ್ಲಿ, ಒಂದು ಶಬ್ದ ಕೂಡ ಮಾತಾಡದೆ ಅವನು ಅಲ್ಲಿಂದ ಹೊರಟ. ಕೈಯ ಹೆಬ್ಬೆರಳೂ ಅದರ ಹತ್ತಿರದ ಬೆರಳೂ ಕೂಡಿಸಿ ತನ್ನ ಮುಂಗೈ ಅಲ್ಲಾಡಿಸಿ, ಆ ನೌಕರನು ಅವನ ವಿಷಯದ ತನ್ನ ಅಭಿಪ್ರಾಯವನ್ನು ವ್ಯಕ್ತಮಾಡಿದ.

ಸಾವಳನು ಬಂಗಲೆಯ ಹತ್ತರ ಬಂದಾಗ ಆ ಹುಡುಗನು ಮುದುಕಿಯ ಮೊಳಕಾಲಿಗೆ ತಬ್ಬುತ್ತ ಕೇಳುತ್ತಿದ್ದ 'ಅಜ್ಜೀ, ಅವ್ವ ಎಲ್ಲಿ ಹೋಗ್ಯಾಳ?'

'ಅಂಬೋಲಿಗೆ'

'ಎಲ್ಯಾಡ ಆ ಅಂಬೋಲಿ?'

'ಸುಮ್ಮಕಿರೊ ಖೋಡಿ' ಕಾಶಿಯು ಅವನನ್ನು ಬೆದರಿಸಿದಳು. ಸೋನ್ಯಾನು ಸಮೀಪದಲ್ಲಿ ಬಂದ ಸಾವಳನ ಕಡೆಗೆ ದಿಟ್ಟಿಸಿ ನೋಡುತ್ತಿದ್ದ. ಸಾವಳನು ಕಾಶಿಗೆ ಕೇಳಿದ— 'ತುಳಸೀದೇನ ಈ ಹುಡುಗ?'

ಕಾಶಿಗೆ ಆಶ್ಚರ್ಯವಾಯಿತು. ಸುರಂಗೆಯನ್ನು ಏಳು ವರ್ಷದ ಪೂರ್ವದ ತುಳಸಿ ಎಂಬ ಹೆಸರಿನಿಂದ ಗುರುತು ಹಿಡಿಯಬಲ್ಲವನು ಇವನು ಯಾರೆಂಬ ವಿಚಾರದಲ್ಲಿದ್ದಳು ಅವಳು. ನಾವಳನು ಕೊಂಕಣಿ ಭಾಷೆಯಲ್ಲಿ ಅದೇ ಪ್ರಶ್ನೆ ಮಾಡಿದ. ಒಮ್ಮೆಲೆ ಸೋನ್ಯಾ ಉತ್ತರಕೊಟ್ಟ 'ತುಳಸಿಯ ಮಗ ಅಲ್ಲ ನಾ! ನನ್ನ ಅಪ್ಪನ ಹೆಸರು ಮಿಸ್ ಸುರಂಗಾ!'

ಅವನನ್ನು ಸುಮ್ಮನಿರಿಸುತ್ತ ಕಾಶಿಯು 'ಗಪ್ ಕೂಡೂ ಇಲ್ಲೇನೋ ಸೋನ್ಯಾ? ಆಡಲಿಕ್ಕೆ ಹೋಗು ಅತ್ತ ನೋಡೋಣ ಅಂ. ಅದು ನೋಡು ಮೋಟಾರು ಬಂತು' ಅಂದಳು.

ಮೋಟಾರ ನೋಡುವ ಸಲುವಾಗಿ ಸೋನ್ಯಾ ಗೇಟಿನ ಕಡೆ ಓಡಿದ. ನಾವಟಿಗೆಯ ಮೇಲೆ ಕೂಡುತ್ತ ಕೂಡುತ್ತ ನಾವಳನು ಅಂದ–'ತುಳಸಿ ಹೋಗ್ಯಾಳ ಅಂಬೋಲಿಗೆ'

'ಹುಡುಗನ ಕರಕೊಂಡ ಬಾ ಅಂತ ಪತ್ರ ಬರದಿದ್ಲು'

'ಹಗಲೆಲ್ಲಾ ನಿನ್ನ ಹತ್ಯಾಕ ಇರತಾನ ಏನ ಇವ?'

'ಹೌದು. ಊರ ಊರ ತಿರಗಬೇಕ ಆಗತೈತಿ ಆಕಿಗೆ ಮತ್ತ—'

'ಇವನ ಸಲುವಾಗಿ ನಾಚಿಕಿ ಬರತೈತಿ! ಹೌದಲ್ಲ?'

'ಅಂತನ ದೂರ ಇಟ್ಯಾಳ ಹುಡುಗನ್ನ'

'ದೊಡದೊಡ ಮಂದ್ಯಾಗ ಹೋಗಬೇಕಾಗತತಿ ಆಕೀಗೆ—ಮತ್ತ ಹಡದಾಳ ಅಂತ ಅಂದರ—ಮತ್ತ ಇಷ್ಟ್ಯಾಗಿ, ಆ ಕಂಪಣಿ ಮ್ಯಾನೇಜರ ಹಟಾನ ಹಿಡಿದ ಹುಡಗನ್ನ ದೂರ ಇಡಲಾಕ ಬೇಕ ಅಂತ!'

'ಆದರ ಇದು ಎಲ್ಲಾ ಎಲ್ಲೀದು ಸುರೂ ಆತು?'

ಕಾಶಿಯು ಅವನ ಕಡೆಗೆ ದಿಟ್ಟಿಸಿ ನೋಡಹತ್ತಿದಳು. ನಾವಳನು ಕಿಸೆಯೊಳಗೆ ಕೈ ಹಾಕಿ ಒಂದು ೫ ರೂಪಾಯಿ ನೋಟು ತೆಗೆದು ಆವಳ ಕೈಯಲ್ಲಿಟ್ಟ. ನೋಟು ಎಂಥಾದು ಅದು? ಮುದುಕಿಯ ಬಾಯಿಬೀಗಕ್ಕೆ ನಡೆಯುವ ಕೀಲಿ ಕೈಯೆ ಆಗಿತ್ತು! ಅತ್ತಿತ್ತ ನೋಡುತ್ತ ಕಾಶಿಯು ಹೇಳಿದಳು. 'ತುಳಸಿ ನನಗ ಕೊರಳ ಆಣೀ ಹಾಕ್ಯಾಳ! ಮತ್ತ ಯಾರಿಗೂ ಗೊತ್ತಿಲ್ಲ ಈ ಸುದ್ದಿ!'

ಹಾಕಿದ ಆಣೆಗೆ 'ಒಳಿತು' ಅನ್ನುವಂತೆಯೆ ಏನೋ ಮತ್ತೊಂದು ನೋಟು ತೆಗೆದು ಸಾವಳನು ಅವಳ ಕೈಯಲ್ಲಿಟ್ಟ. ಮುದುಕಿ ಒಮ್ಮೆಲೆ ಮಾತಿಗಾರಂಭಿಸಿದಳು. ಭಯಭೀತ ದೃಷ್ಟಿಯಿಂದ ಅತ್ತಿತ್ತ ನೋಡುತ್ತ ೭–೮ ವರ್ಷದ ಪೂರ್ವದ ಎಲ್ಲ ಸುದ್ದಿ ಹೇಳಿದಳು. ತಾನು ಬೆಳಗಾಂವಿ ಯಲ್ಲಿಯ ಒಂದು ಫರಾಳದ ಅಂಗಡಿಯಲ್ಲಿ ಕೆಲಸಗಾತ್ತಿಯಾಗಿ ಇದ್ದಳು. ಒಂದು ದಿವಸ ತುಳಸಿಯು ಏನನ್ನೋ ಕೊಳ್ಳುವ ಸಲುವಾಗಿ ಅಲ್ಲಿಗೆ ಬಂದಳು. ಅವಳ ಮಾತು ಕೇಳಿ ತಾನು ಹೊರಗೆ ಬಂದಳು. ಮೊದಲೇ ನಕ್ಷತ್ರದಂಥ ರೂಪ, ಅದರಲ್ಲಿ ಬೆಳೆದ ಬಸಿರು! ಮೈಮೇಲಿನ ಬಟ್ಟೆ ಹರಿದಿದ್ದರೂ ಸಹ ಆಕೃತಿ ಕಣ್ಣುತುಂಬುವಂತೆ ಇತ್ತು. ಅವಳು ತನ್ನ ಕರ್ಮಕಥೆಯ ಪುರಾಣವನ್ನು ಬಿಚ್ಚಿದಳು. ತನಗೆ ಕರುಣೆ ಬಂದಿತು. (ಸಾವಳನಿಗೆ ಅನಿಸಿತು: ಅವಳ ಸಲುವಾಗಿ ಅಂದರೆ ಅವಳ ಹತ್ತಿರದ ಹಣದ ಸಲುವಾಗಿಯೇ ಕರುಣೆ ಬಂದಿರಬಹುದೆಂದು). ಮುಂದೆ ಹಡೆಯುವದಾದನಂತರ ತನ್ನ ಕೂಡ ಕೆಲಸಕ್ಕೆ ಬರಹತ್ತಿದಳು. ತನ್ನ ಅಂಗಡಿಯ ಮಾಲಕನಿಗೆ ನಾಟಕದ ಹುಚ್ಚು ವಿಶೇಷವಾಗಿತ್ತು. ಅಷ್ಟ ರಲ್ಲಿ ಅಲ್ಲಿ ಒಂದು ಕಂಪನಿ ಬಂದಿತು. ಅದರ ಮಾಲಕನು ಒಕ್ಕಲಗಿತ್ತಿ ಯನ್ನು ಬೇಡಿದನು. ತನ್ನೊಡನೆ ಸುರಂಗೆಯಾದರೂ ಕಂಪನಿಯಲ್ಲಿ ಬರ ತೊಡಗಿದಳು. ಆ ಮ್ಯಾನೇಜರನು ಬೀಸುವ ಕಲ್ಲಿನ ಅವಳ ಹಾಡು ಕೇಳಿದ; ಅವಳ ರೂಪವನ್ನು ಕಂಡ––

ಸಾವಳನಿಗೆ ಮುದುಕಿಯ ರಗಳೆ ಪುರಾಣವು ಅತ್ಯಂತ ಅಸಹ್ಯ ವಾಯಿತು. ಅವನು ಕೇಳಿದ: 'ಅವಳನ್ನು ಮೊದಲು ಮನ್ಯಾಗಿಂದ ಹೊರಗೆ ಯಾರ ಹಾಕಿದರು?'

'ದಾದಾ ಅವರು'

'ದಾದಾ ಯಾವ?' ಸಾವಳನ ಧ್ವನಿಯು ಕಠೋರವಾಗಿತ್ತು.

'ಕಾಮಾಪುರದ ದಾದಾ'

'ಗ್ವಾಡಂಬಿ ಕಾರಖಾನೆದವನs?'

'ಹೌದು. ತಲಿಯಿಂದ ತಲಿಗೆ ಬಂದ ಭಾರಿ ಸೀಜತನ ಅದು. ಅವರ ಅಪ್ಪ ನನ್ನ ಗಂಡನ್ನ––'

ಆದರೆ ಸಾವಳನಿಗೆ ಮುದುಕಿಯ ಆತ್ಮಚರಿತ್ರವನ್ನು ಕೇಳುವ ಇಚ್ಛೆಯಿರಲಿಲ್ಲ.

'ನೀ ಎಲ್ಲಿ ಇರತೀ?'

'ಕಾವಲಾಪುರದಾಗ. ಮನ್ಯಾಗ ದೀಪಗಿ ಹಚ್ಚತೇನಿ. ಅಂತೂ ಹೋದ ಐದು ವರ್ಸ'

'ನಿನ್ನ ಮನಿ ಎಲ್ಲಿ ಐತಿ?'

'ಕೆರೀ ಮಗ್ಗಲಿಗೆ'

ಸಾವಳನು ಮೇಲಕ್ಕೆ ನೋಡಿದ. ಪ್ರಕಾಶದ ರಾಜ್ಯವು ಮುಗಿದು ಸಾವಕಾಶವಾಗಿ ಕತ್ತಲೆಯು ಪೃಥ್ವಿಯನ್ನು ಮುಸುಕುತ್ತಿತ್ತು. ಅವನ ಸಂತಪ್ತಮನಸಿನ ಪ್ರತಿಬಿಂಬವೇ ಇತ್ತೋ ಏನೋ ಅದು!



೧೨

# ಮಧ್ಯರಾತ್ರಿ-ಮಧ್ಯಾಹ್ನ

ಮುಂಜಾನೆ ಮೋಟಾರಿನಿಂದ ಅಂಬೋಲಿಗೆ ಬಂದಾಗ ಸುರಂಗೆಯು ಸುಮ್ಮನೇ ಇದ್ದಳು. ಆದರೆ ಸೂರ್ಯನು ಮೇಲಕ್ಕೇರಿದಂತೆ ಅಂಬೋಲಿಯು ಮಂಜಿನ ಮುಸುಕಿನೊಳಗಿಂದಲೂ ಅವಳ ಮನಸ್ಸು ಉದಾಸೀನತೆಯೊಳಗಿಂದಲೂ ಹೊರಬಿದ್ದವು.

'ಸಂಜೆಗೆ ನಾವು ಬಹಳ ದೂರ ತಿರುಗಾಡಲಿಕ್ಕೆ ಹೋಗೋಣ' ಎಂದು ಸುರಂಗೆಯು ಅಂದಾಗ ರಮಾಕಾಂತನಿಗೆ ನಗು ಬಂದದ್ದು ಈ ಕಾರಣದ ಮೂಲಕವೇ.

'ನಗಲಿಕ್ಕೆ ಏನಾಯಿತು?' ಅವಳು ಕೇಳಿದಳು.

'ಮಂಜು ಕರಗಿತು'

'ಮತ್ತೆ ಸಂಜೆಯ ಕಡೆಗೆ ಮುಸುಕುವದಿಲ್ಲವಲ್ಲ' ಎಂದು ಸುಲೋಚನೆ ಪ್ರಶ್ನೆ ಮಾಡಿದಳು.

'ಅದನ್ನು ಈ ಸಜೀವ ಆಂಬೋಲಿಗೆ ಕೇಳು' ಎಂದು ಸುರಂಗೆಯ ಕಡೆಗೆ ಕೈ ಮಾಡುತ್ತ ರಮಾಕಾಂತನು ಉದ್ಗಾರ ತೆಗೆದ.

ಸುಲೋಚನೆಯು ಸುರಂಗೆಯ ಕಡೆಗೆ ನೋಡಿ ನಗುತ್ತ 'ನಿರ್ಜೀವ ಆಂಬೋಲಿಯು ಬೇಸಿಗೆಯಲ್ಲಿ ಕೂಡ ತಣ್ಣಗಿರುತ್ತದೆ'

'ಆದರೆ ಇದು ಮಾತ್ರ ಚಳಿಯ ದಿವಸದಲ್ಲಿ ಕೂಡ ಬೆಚ್ಚಗೆ ಇರುತ್ತದೆ'

ಮಧ್ಯಾಹ್ನದ ಊಟ ಮುಗಿಯುವಷ್ಟರಲ್ಲಿಯೇ ಬಾಗಿಲಲ್ಲಿ ಬಾಪ್ಪಾ ಮತ್ತು ವಿದ್ಯಾಧರರು ದುತ್ತೆಂದು ಹಾಜರ ಆಗಿದ್ದರು. ಸುಲೋಚನೆಯ ಮನಸ್ಸಿನಲ್ಲಿ ಮೊದಲು ಆಶ್ಚರ್ಯ, ಆ ಮೇಲೆ ಆನಂದದ ತೆರೆಗಳು ಎದ್ದವು.

'ಹೀಗೆ ಹೇಗೆ ತಪ್ಪದೆ ಬಂದಿರಿ ನೀವು ಬಾಪ್ಪಾ?'

'ಒಳ್ಳೇ ಗುಪ್ತಪೋಲೀಸನಾಗಬಹುದಾಗಿತ್ತಲ್ಲವೇ ನಾನು?'

'ಹಾಗಾಗಿದ್ದರೆ ನೀವಷ್ಟು ಪಂಜೆಗೆ ಒಡೆಯರು ಯಾರು ಸಿಗುತ್ತಿದ್ದರು?'

'ಮಾಡು ಚೇಷ್ಟೆ! ಆದರೆ ನಿನ್ನನ್ನು ಕಾಮಾಪುರಕ್ಕೆ ಒಯ್ಯುವದರ ಸಲುವಾಗಿಯೇ ನಾನು ಈಗ ಬಂದೀನಿ!'

'ದಾದಾ ಬಹಳ ಸಿಟ್ಟಿಗೆ ಬಂದಿರಬಹುದಲ್ಲವೆ? ಮೊನ್ನೆ ಬರೆದ ಅವರ ಪತ್ರದಲ್ಲಿಯಂತೂ ಎಣಿಸಿ ಎರಡೇ ಸಾಲುಗಳಿದ್ದವು'

'ಎಲ್ಲಿಯಾದರೂ ನಿನ್ನ ಸಲುವಾಗಿ ವರ ನೋಡುವ ಗಡಿಬಿಡಿಯಲ್ಲಿ ಇದ್ದಾರೆ ದಾದಾ ಈಗ!'

ಎಲ್ಲರೂ ಆಶ್ಚರ್ಯದಿಂದ ನೋಡತೊಡಗಿದರು. ಸುಲೋಚನೆಯು ಸಿಟ್ಟಿನ ನೋಗಿನಿಂದ ಕೇಳಿದಳು:

'ಯಾವದು ಲಗ್ನ? ನನ್ನದೇ?'

'ಹೌದು ನಿನ್ನದೇ. ಈಗ ಅವರ ಲಗ್ನ ಏನು ಆಗಬೇಕಾಗಿಲ್ಲ! ಮತ್ತೆ ನನ್ನದೂ ಆಗಬೇಕಾಗಿಲ್ಲ! ನಿನ್ನ ಲಗ್ನದ ಸಲುವಾಗಿ ಕಾರಖಾನೆಯನ್ನು ಬಂದುಮಾಡಿರುವರು ಈಗ'

'ಅಂದರೆ?'

'ಈಗೇನೂ ವಿಶೇಷ ಲಾಭ ಇಲ್ಲ ಕಾರಖಾನೆಯ ಕೆಲಸದಲ್ಲಿ. ಹಾನಿಯಿಂದ ಹಾಗೇ ನಡೆಸಬೇಕೆಂದರೆ ನಿನ್ನ ಲಗ್ನದ ಸಲುವಾಗಿ ಕಾದಿಟ್ಟ ಹಣ ಖರ್ಚು ಮಾಡಬೇಕಾಗುತ್ತದೆ.'

ವಿದ್ಯಾಧರನ ಕಡೆಗೆ ನೋಡುತ್ತ ಸುಲೋಚನೆಯು ಕೇಳಿದಳು:

'ವಿದ್ಯಾಧರ, ಗಾಂಧೀಜಿಯವರ ಸತ್ಯ, ಅಸ್ತೇಯ ಮುಂತಾದ ತತ್ವಗಳು ಇವೆಯಲ್ಲವೆ?'

'ಹೌದು'

'ಅದರಲ್ಲಿ ಇನ್ನೊಂದು ಹೆಚ್ಚಿಗೆ ಕೂಡಿಸಬೇಕಾಯಿತು.'

'ಯಾವದು?'

'ಚೇಷ್ಟೆ.'

ಮಧ್ಯಾಹ್ನದ ಚಹಾದನಂತರ ಎಲ್ಲರೂ ತಿರುಗಾಡಲಿಕ್ಕೆ ಹೊರಬಿದ್ದರು. ಸುಲೋಚನೆಯು ಈ ಮೊದಲೆ ಬಿಸಿಲು ದಿನದಲ್ಲಿ ಒಂದೆರಡು ಸಾರೆ ಅಂಬೋಲಿಗೆ ಬಂದು ಹೋದವಳಾಗಿದ್ದರಿಂದ ಅವಳಿಗೆ ಅಲ್ಲಿಯ ಹಾದಿಗಳೆಲ್ಲವೂ ಗೊತ್ತಾಗಿದ್ದವು. ಎಲ್ಲರಿಗೂ ಮುಂದೆ ಸುಲೋಚನೆ ವಿದ್ಯಾಧರರು, ಆ ಮೇಲೆ ಸುರಂಗೆ-ರಮಾಕಾಂತರು, ಕಟ್ಟಕಡೆಗೆ ಬಾಪ್ಪಾ ಇವರು.—ಈ ಪ್ರಕಾರವಾಗಿ ಎಲ್ಲರೂ ನಡೆದಿದ್ದರು. ಅದೇ ಮಧ್ಯಾಹ್ನದ ೩ ಗಂಟೆಯಾಗಿ ಹೋಗಿತ್ತು. ಹವೆಯಲ್ಲಿಯ ಬಿಸಿಲು ಚಳಿಗಳ ಸಮ್ಮಿಶ್ರಣವು ಆಲ್ಹಾದಕರವಾಗಿತ್ತು. ಗಾಳಿಯಿಂದ ಅಲ್ಲಾಡುವ ಗಿಡಗಳು ಆನಂದದಿಂದ ಕುಣಿಯುವವೆಂದು ಅನಿಸುತ್ತಿತ್ತು. ಜನರ ಹೆಜ್ಜೆಯ ಸಪ್ಪಳ ಕೇಳಿದೊಡನೆಯೆ ಅಲ್ಲಿಯೇ ಮೇಯುತ್ತಿರುವ ಆಡುಗಳು ದೂರದಲ್ಲಿ ಜಿಗಿದು ಹೋಗುತ್ತಿದ್ದವು. ಅವುಗಳ ಮೊಂಡ ಬಾಲಗಳೂ, ಸಣ್ಣ ಮೋರೆಗಳೂ, ಓಟದ ಚಪಲತೆಯೂ ಮನೋಹರವಾಗಿದ್ದವು. ಪಕ್ಷಿಗಳ ಮಧುರವಾದ ಕಿಲಕಿಲಾಟವು ಒಂದೇ ಸವನೆ ಕೇಳಬರುತ್ತಿತ್ತು. ಆದರೆ ಗುಜುಗುಜುಮಾಡುವ ಶಾಲೆಯ ವರ್ಗದಲ್ಲಿ ಒಬ್ಬ ಕಿಡಿಗೇಡಿ ಹುಡುಗನು ನಡುವೇ ಕೂಗುವಂತೆ ಆ ಕಿಲಕಿಲಾಟದ ನಡುವೆ ಕೋಳಿಯು ಕೂಗು

ಜೋರಿನಿಂದ ಕೇಳಿಸಿ ಲಕ್ಷ್ಯವನ್ನು ಎಳೆಯುತ್ತಿತ್ತು. ಗಾಳಿಯ ಝುಳು ಕಿಸ ಕೂಡ ಉದುರಿ ಬೀಳುವ ಎಲೆಗಳು ಗಿರಕಿ ಹೊಡೆಯುತ್ತ ನೆಲಕ್ಕೆ ಬರುತ್ತಿದ್ದವು, ಮರಣವು ಸಹ ಅವುಗಳ ದೃಷ್ಟಿಯಿಂದ ಆನಂದಕೊಡುವ ಕಲೆಯೇನೋ ಅನ್ನುವಂತೆ.

ಸುಲೋಚನೆಯು ಸ್ವಲ್ಪ ವೇಳೆಯಲ್ಲಿಯೇ ಒಂದು ಸುಂದರ ಸ್ಥಳಕ್ಕೆ ಕರೆದು ತಂದಳು. ಕೆಳಗಡೆಗೆ ಸಿಂಹದಂತೆ ಬಾಯಿ ತೆರೆದ ಕೊಳ್ಳ ಮತ್ತು ಅದರ ಸುತ್ತಲೂ ಆಯಾಲಿನಂತೆ ಕುಣಿಯುವ ಬಳ್ಳಿಗಳು. ವಿದ್ಯಾಧರನು ಆ ದಿಬ್ಬದ ಮೇಲೆ ಏರಿ ತುಟ್ಟತುದಿಯ ಮೇಲೆಹೋಗಿ ಕುಳಿತನು. ಸುಲೋಚನೆಯು ಹೇಳಿದಳು—

'ಅಷ್ಟು ಮುಂದಕ್ಕೆ ಹೋಗಿ ಕೂಡಬೇಡಿರಿ, ತೂಕ ತಪ್ಪೀತು'

'ಆದರೇನಾಯಿತು ಅನಾಯಾಸವಾಗಿ ವರ್ತಮಾನಪತ್ರದಲ್ಲಿ ಹೆಸರು ಬರುವದು!'

ಸುಲೋಚನೆಗೆ ಅವನ ಸ್ವಾಭಾವಿಕ ಧೈರ್ಯದ ಕೌತುಕವೆನಿಸಿತು. ಅವಳು ಸ್ವಲ್ಪ ಇತ್ತಕಡೆಗೇ ಕುಳಿತುಕೊಂಡಳು. ಬಾಪ್ಪಾ ಅವರಂತೂ ಎಲ್ಲಿ ಇದ್ದರೋ ಯಾರಿಗೂ ಗೊತ್ತಿರಲಿಲ್ಲ. ವಿದ್ಯಾಧರನು ಕೇಳಿದ.—

'ಬಾಪ್ಪಾ ಅವರು ಎಲ್ಲಿ?'

'ಅವರೇನು ಎಲ್ಲಿ ಹೋದರೂ ಹುಲಿಯಂತೂ ಅವರನ್ನು ಮುರಿದು ತಿನ್ನುವದಿಲ್ಲ'

'ಅದೇಕೆ?'

'ಅಹಿಂಸಾವಾದಿಗಳಲ್ಲವೇ ಅವರು?'

'ಆದರೆ ಹುಲಿಗಳು ಎಲ್ಲಿ ಆಗಿವೆ ಅಹಿಂಸಾವಾದಿಗಳು?'

ವಿದ್ಯಾಧರನು ಇಷ್ಟೊಂದು ಹುಡುಗಾಟಿಕೆಯಲ್ಲಿ ಮಾತಾಡಬಲ್ಲ ನೆಂದು ಸುಲೋಚನೆಗೆ ಕಲ್ಪನೆಯೇ ಇರಲಿಲ್ಲ. ಜುಹುಕ್ಕೆ ಹೋದ ದಿವಸ ಹುಣ್ಣಿಮೆಯ ಬೆಳದಿಂಗಳಲ್ಲಿ ಸ್ತಂಭದಂತೆ ಕುಳಿತ ವಿದ್ಯಾಧರನು ಇವನೇ ಏನೆಂಬುದು ಸುಲೋಚನೆಗೆ ತಿಳಿಯದಾಯಿತು! ಅವಳು ಚೇಷ್ಟೆ ಯಿಂದ ಅಂದಳು 'ಕಾಪಸಾಪುರದ ಹವೆ ನಿಮಗೆ ಚೆನ್ನಾಗಿ ಮಾನಿಸಿದಂತೆ ಕಾಣುತ್ತದೆ.'

'ನನಗೋ ನನ್ನ ಬಾಯಿಗೋ?' ಅವಳ ಪ್ರಶ್ನದ ಅರ್ಥ ತಿಳಿದು ಕೊಂಡು ವಿದ್ಯಾಧರನು ಪುನಃ ಪ್ರಶ್ನಮಾಡಿದನು.

'ನಿಮ್ಮ ಯಂತ್ರ ಎಲ್ಲಿಯ ವರೆಗೆ ಬಂದಿದೆ?'

'ಎಲ್ಲವೂ ಸರಿಯಾಗಿದೆ, ಆದರೆ ನಡುವಿನ ಜೋಡಣೆಯ ಬಗ್ಗೆ ಒಂದು ಪ್ರಶ್ನ ಉಳಿದಿದೆ'

'ನನ್ನ ಚಿತ್ರದಂತೆಯೇ ಅನ್ನಬಾರದೇ? ಸುರಂಗಾಬಾಯಿಯಂಥ ಲಕ್ಷ್ಮಿಯು ಸಿಕ್ಕರೂ ಚಿತ್ರಕ್ಕೆ ಹಿನ್ನೆಲವೇ ಹೊಳೆಯಲೊಲ್ಲದು. ಅಂಬೋಲಿಗೆ ಹೋದರೆ ಮಾತ್ರ ಸಾಧ್ಯ. ಮತ್ತೆ—'

ಸುರಂಗೆಯು ರಮಾಕಾಂತನಿಗೆ ಆಂಬೋಲಿಯ ಸಮುದ್ರದೊಳಗಿಂದ ಹೊರಗೆ ಬಂದ ಲಕ್ಷ್ಮಿಯಂತೆಯೇ ಕಂಡಳು. ಒಂದು ದೊಡ್ಡ ಪಡದೆಯ ಮೇಲೆ ಸಮುದ್ರದ ತೆರೆಗಳನ್ನು ಚಿತ್ರಿಸಿದಂತೆ ನೀಲವರ್ಣದ ಗುಡ್ಡಗಳ ಹಿಂದಿನ ಗುಡ್ಡಗಳೂ, ವಿಸ್ತೀರ್ಣವಾದ ಕೆರೆಯಂತೆ ಕಾಣುವ ಆ ಆಳವಾದ ಕೊಳ್ಳವೂ, ಅಖಂಡವಾಗಿ ನರ್ತಿಸುವ ಆ ಗಿಡಬಳ್ಳಿಗಳೂ, ಆಕಾಶದಲ್ಲಿಯ ಸೌಮ್ಯವಾದ ತಿಳಿ ಹಳದಿ ಬಣ್ಣದ ಛಾಯೆಯೂ ಅವರಿಗೆ ಆ ಕ್ಷಣದಲ್ಲಿ ಸೃಷ್ಟಿಯ ಹೃದಯದಲ್ಲಿಯೆ ಪ್ರವೇಶ ಸಿಕ್ಕಂತಾಗಿತ್ತು. ಸೌಂದರ್ಯಕ್ಕಿಂತಲೂ ಜೀವನವನ್ನು ಶ್ರೇಷ್ಠವೆಣಿಸುವ ಮಾನವರು ಮೂರ್ಖರೆಂದು ಅವರಿಗೆ ಅನಿಸಿರಬಹುದು. ಜೀವನ! ಎಲ್ಲಿ ಇದೆ ಇಲ್ಲಿ ಜೀವನ! ಎತ್ತ ನೋಡಿದತ್ತ ಸೌಂದರ್ಯದ ಸಾಮ್ರಾಜ್ಯ—

ಬುಳು ಬುಳು ಸಪ್ಪಳ ಕೇಳಿದೊಡನೆಯೆ ರಮಾಕಾಂತನು ಹಿಂದಿರುಗಿ ನೋಡಿದ. ಬಾಪ್ಪಾ ಅವರು ಒಬ್ಬ ಕುರುಬನನ್ನು ಕರೆದುಕೊಂಡು ಬರುತ್ತಿದ್ದರು. ಅವನ ಕೈಯಲ್ಲಿಯ ಕೋಲಿನ ತುದಿಗೆ ಕಟ್ಟಿದ ಗಂಟೆಯು ಸಪ್ಪಳ ಮಾಡುತ್ತಿತ್ತು. ಸುಲೋಚನೆಗೆ ಕೇಳಿಸಿತೋ ಇಲ್ಲವೋ ಅನ್ನುವಂತೆ ಅವನು ಮೆಲ್ಲನೆ 'ಸಮಾನಸ್ಕಂದರ ಸಂಯೋಗವೇ ಆಗಿದೆ' ಎಂದನು.

'ಆ ಕುರುಬನು ದೂರದಲ್ಲಿಯೇ ಕುಳಿತುಕೊಳ್ಳಬೇಕೆಂದರೆ ಬಾಪ್ಪಾ ಅವರು ಅವನನ್ನು ತಮ್ಮ ಒಳಿಯಲ್ಲಿಯೇ ಕೂಡಿಸಿಕೊಂಡರು. ಅವನ

ಕರ್ರಗಿನ ಮೈಬಣ್ಣಕ್ಕೆ ಅವನ ಬೆಳ್ಳಿಯ ಉಡದಾರವು ಒಳ್ಳೇ ಎದ್ದು ಕಾಣುತ್ತಿದ್ದಿತು. ಒಂದು ತುಂಡು ಪಲ್ಲೆಯ ಹೊರತು ಅವನ ಮೈಮೇಲೆ ಬೇರೆ ಏನೂ ಅರಿವೆಗಳಿರದಿದ್ದರೂ, ಶರೀರವು ಚೆನ್ನಾಗಿ ಪುಷ್ಟವಾಗಿದ್ದ ಮೂಲಕ ಸೆಕೆಯಾಗುತ್ತಿದ್ದರೂ ಅರಿವೆಗಳನ್ನು ಹಾಕಿಕೊಳ್ಳುವ ಮನುಷ್ಯ ನಿಗೆ ಅಸೂಯೆಯುಂಟಾಗುವಂತೆ ತೋರುತ್ತಿದ್ದನು. ಮುಷ್ಟಿಯಲ್ಲಿ ಬಿಗಿಯಾಗಿ ಕೋಲನ್ನು ಹಿಡಿದದ್ದರಿಂದ ಎದ್ದು ಕಾಣುವ ಮುಂಗೈಯೂ, ಆತನ ಕಾಲೊಳಗಿನ ಹಳ್ಳಿಗಾಡ ಜೋಡುಗಳೂ ನೋಡಿದ ಕೂಡಲೆ ಕಣ್ಣಲ್ಲಿ ತುಂಬುತ್ತಿದ್ದವು. ದೊಡ್ಡ ಸುಧಾರಿಸಿದ ಜನರಲ್ಲಿ ಬಂದು ಕುಳಿತು ಕೊಂಡದ್ದರಿಂದ, ಕ್ಷಣಮಾತ್ರ ಹೇಗೋ ಎನಿಸಿಕೊಂಡು ಅವನು ತನ್ನ ಎಡಬಲಕ್ಕೆ ನೋಡುತ್ತಿದ್ದನು. ಆದರೆ ಮರುಕ್ಷಣವೇ ಆತನ ಪ್ರಸನ್ನ ದೃಷ್ಟಿಯು ಅವರೆಲ್ಲರ ಮೇಲೆ ಬಿದ್ದಿತು. ಹೆಗಲ ಮೇಲಿನ ಕಂಬಳಿಯನ್ನು ತೆಗೆದು ಅದನ್ನು ತನ್ನ ಮೈಮೇಲೆ ಹೊದ್ದುಕೊಳ್ಳುತ್ತಿರುವಷ್ಟರಲ್ಲಿ—

'ಇವರೆಲ್ಲಿ ಸಿಕ್ಕರು ನಿಮ್ಮ ಸ್ನೇಹಿತರು?' ರಮಾಕಾಂತನು ಉಪ ಹಾಸದ ಸ್ವರದಲ್ಲಿ ಕೇಳಿದ.

'ಇಲ್ಲಿಯೇ ಇದ್ದ. ನೀವು ಅಂಬೋಲಿಯನ್ನು ನೋಡಲಿಕ್ಕೆ ಬಂದಿರುವಿರೆಂದ ಮೇಲೆ—'

'ನೋಡತಕ್ಕದ್ದೆಲ್ಲವೂ ನಮ್ಮ ಮುಂದೆ ಹಬ್ಬಿದೆ'

'ಮುಂದೆ ಕುಳಿತೂ ಇದೆ'

ರಮಾಕಾಂತನು ತುಚ್ಛದೃಷ್ಟಿಯಿಂದ ಆ ಕುರುಬನ ಕಡೆಗೆ ನೋಡಿದ್ದು ಬಾಪ್ಪಾ ಅವರ ಲಕ್ಷ್ಯದಲ್ಲಿ ಬಂದಿತು. ಅವರು ಅಂದರು:

'ಈ ಕುರುಬನು ನಿಮ್ಮನ್ನೇನೋ ಕೇಳಬೇಕೆಂದು ಬಂದಿರುವನು'

'ನಾನೇನೂ ಪಶುಗಳ ವೈದ್ಯನಲ್ಲ! ಸುರಂಗೆಯಾದರೂ ಕಂಬಳಿ ಗಳ ಕಾರಖಾನೆಯನ್ನೇನು ತೆರೆದಿಲ್ಲ. ಮತ್ತು ಸುಲೋಚನೆಯು—'

'ಅವನೇನು ಅನ್ನುವನು ಅದನ್ನಾದರೂ ಕೇಳಿಕೊಳ್ಳುವಿರೋ ಇಲ್ಲವೋ? ಕೇಳೋ ಇವರನ್ನು—'

'ನನ್ನನ್ನು ಕೇಳಬೇಡಪ್ಪಾ. ಈ ಬಾಯಿಯವರನ್ನು ಕೇಳಿಕೋ

ಬೇಕಾದರೆ' ಎಂದು ಅನ್ನುತ್ತ ರಮಾಕಾಂತನು ಸುರಂಗೆಯ ಕಡೆಗೆ ಬೆರಳುಮಾಡಿ ತೋರಿಸಿದ.

'ಹಂತಾಪ ಏನ ದ್ವಾಡದ ಇಲ್ಲ ಬಿಡ್ರಿ ದ್ಯಾವರೂ ಕೇಳೂದೂ'

'ಎಲೇ ಈ ಬಾಯಿಸಾಯುವರಿಗೆ ದ್ಯಾವರೂ ಏನ ಅಂತೀಯೋ ?'

'ಬಾಯೂವ್ರು. . ಗಾಂದೆಪ್ಪನವರ್ನ ಬಿಟ್ರೇನರಿ?'

ಈ ಪ್ರಶ್ನೆಯನ್ನು ಕೇಳಿದ ಕೂಡಲೆ, ಬಾಪ್ಪಾ ಅವರ ಹೊರತಾಗಿ ಎಲ್ಲರೂ ಚಕಿತರಾಗಿ ಅವನ ಕಡೆಗೆ ನೋಡತೊಡಗಿದರು. ಜಗತ್ತಿನ ಯಾವದೋ ಒಂದು ಮೂಲೆಯಂತಿರುವ ಈ ಸ್ಥಳದಲ್ಲಿ ಇದ್ದುಕೊಂಡು ತನ್ನ ಕುರಿಗಳನ್ನು ಕಾಯುತ್ತಿರುವ ಈ ಜಂಗಲೀ ಪ್ರಾಣಿಯು—ಈತ ನದು ಗಾಂಧಿಯವರ ಕೂಡ ಏನು ಸಂಬಂಧ? ರಮಾಕಾಂತ–ಸುರಂಗೆ ಯರ ಮಾತಿನಲ್ಲಿ ತಿಂಗಳದಲ್ಲಿ ಒಮ್ಮೆಯಾದರೂ ಗಾಂಧಿಯ ಹೆಸರು ಬಂದಿರಲಿಲ್ಲ. ಮತ್ತು ಬರಲಿಕ್ಕೆ ಕಾರಣವಾದರೂ ಏನು? ಮಹಾತ್ಮಾ ಅವರೇನು ಕಥಾಲೇಖಕ, ನಾಟಕಕಾರ, ಚಿತ್ರಕಾರ ಅಥವಾ ಗಾಯಕ ರಾಗಿರಲಿಲ್ಲ.

ಸುರಂಗೆಗೆ ಗಾಂಧಿಯನ್ನುವವರು ಇದ್ದುದ್ದು ಮಾತ್ರ ಗೊತ್ತಿತ್ತು. ಆದರೆ ಆ ಕುರುಬನ ಆ ಪ್ರಶ್ನದ ಮೂಲಕ ಅವಳಿಗೆ ತನ್ನಲ್ಲಿ ಏನೋ ಕಡಿಮೆ ಇದ್ದಂತೆ ಅನಿಸಿತು. ಮೈಮೇಲೆ ಪೂರ್ಣ ಅರಿವೆಗಳು ಕೂಡ ಇರದಂಥವನು, ಗಾಂಧಿಯ ವಿಷಯಕ್ಕೆ ಕುತೂಹಲದಿಂದ ಕೇಳುತ್ತಿರ ಬೇಕು, ಮತ್ತು ತನಗೆ ಮಾತ್ರ, ಅವರು ತುರಂಗದಲ್ಲಿದ್ದರೇನು, ಹೊರಗೆ ಇದ್ದರೇನು ಒಂದೇ ಅನಿಸಬೇಕು. ಅವನಿಗೆ ಹೊದ್ದುಕೊಳ್ಳಲಿಕ್ಕೆ ಅರಿವೆ ಗಳಿಲ್ಲದಿದ್ದರೂ ಅವನ ಹೃದಯ—

ಸುರಂಗೆಯು ಸುಮ್ಮನಿದ್ದುದ್ದನ್ನು ನೋಡಿ, ರಮಾಕಾಂತನು ಕೇಳಿದ:

'ಗಾಂಧಿಯವರನ್ನು ನೋಡಿರುವಿ ಏನು ನೀನು?'

'ನೋಡೀನಿ ದ್ಯಾವರು. ಈ ಬ್ಯಾಸಿಗ್ಗಿ ಯೋಳ ವರಸ ಆದೂ ನೋಡ್ರಿ. ಇಲ್ಲೇ ಆ ಬಂಗಲೇದಾಗ ಬಂದ ಇದ್ರು. ಒಂದ ದಿನಾ ಥೆಂಜೇಕಡೆ, ದೂರದಾಗ ನಿಂತ ನೋಡೀನಿ ಕಣ್ತುಂಬ ಅವರನ್ನ'

ಸುರಂಗೆಯು ಗಾಂಧಿಯುವರನ್ನು ನೋಡಿದ್ದಿಲ್ಲ. ಅವಳು ತನ್ನ ಮೇಲೆ ತಾನೇ ಸ್ವಲ್ಪ ಸಿಟ್ಟಾದಳು.

'ಯಾರಂತೆ ಕಾಣಸತಾರೋ ಗಾಂಧಿಯುವರು?' ರಮಾಕಾಂತನು ಪ್ರಶ್ನೆ ಮಾಡಿದ.

'ಅಗದೀ ಸಾಟಂಬುವಾ ಅವರ ಹಾಂಗ ಕಾಣಿಸತಾರ ಯಪಾ!'

'ಈ ಸಾಟಂಬುವಾ ಅಂದರ ಯಾರು ಇವ?' ರಮಾಕಾಂತನು ನಸುನಗುತ್ತ ಸುಲೋಚನೆಗೆ ಕೇಳಿದ.

'ಈ ಘಟ್ಟದ ಕೆಳಗಡೆಗೆ ಇರತಾರೆ ಒಬ್ಬರು'

'ಏನು ಮಾಡುತ್ತಾರೆ ಅವರು?'

'ಬುವಾ ಅವರು ಏನಾರ ಮಾಡುಬೇಕಾಗತದೇನು?'

ರಮಾಕಾಂತನೇ ಇನ್ನೂ ಏನೋ ಮಾತಾಡತಕ್ಕವನಿದ್ದನು. ಇಷ್ಟರಲ್ಲಿ ದೂರದಿಂದ ಕೂಗು ಕೇಳಬಂದಿತು. ಅದನ್ನು ಕೇಳಿದ ಕೂಡಲೆ ಕುರುಬನು ಎದ್ದು 'ಬರತೀನರಿ ಯಪ್ಪಾ' ಅಂದ.

ಎಲ್ಲರೂ ಅವನು ಹೋಗುವದನ್ನು ಸ್ತಬ್ಧವಾಗಿ ನೋಡುತ್ತಿದ್ದರು. ಅವನು ಹೋದಮೇಲೆ, ರಮಾಕಾಂತ ಹಾಗೂ ಬಾಪ್ಪಾ ಅವರ ನಡುವೆ ಜೀವನ ಮತ್ತು ಕಲೆ ಈ ವಿಷಯದ ಮೇಲೆ ಘೋರ ವಾಗ್ವಾದವಾಯಿತು. ಆ ಕುರುಬನ ಜೀವನವು ಆಂಬೋಲಿಯ ಸೌಂದರ್ಯದಷ್ಟೇ ಮಹತ್ವದ್ದು ಎಂದು ಬಾಪ್ಪಾ ಅವರ ಮತ. 'ಇಂಥ ಸುಂದರ ಸ್ಥಳದಲ್ಲಿ ಇಂಥ ಕುರುಬರಿಗೆ ಇರಗೊಡುವದೇ ಮೂಲ ತಪ್ಪು. ಏನು ಕರಿಯ ಹೆಡ್ಡ ಅವ! ಇಂಥ ಸೃಷ್ಟಿಸೌಂದರ್ಯಕ್ಕೆ ದೃಷ್ಟಿಯಾಗಬಾರದೆಂದೇ ಸೃಷ್ಟಿಯು ಮೊಗದ ಮೇಲಿಟ್ಟ ಕರಿಯ ಬೊಟ್ಟೇ!' ಇದು ರಮಾಕಾಂತನ ಉತ್ತರ. ಸುರಂಗೆಯು ಸುಮ್ಮನೆ ವಾದವನ್ನು ಕೇಳುತ್ತ ಕುಳಿತಿದ್ದಳು. ಸುಲೋಚನೆಯಾದರೂ ರಮಾಕಾಂತನ ಮತವನ್ನು ಎತ್ತಿಹಿಡಿಯಲಿಲ್ಲ. ಆದರೆ ಅವಳು ಹೇಳಿದ್ದೇನೆಂದರೆ: 'ಈ ಕುರುಬನ ಸರಳವಾದ ಆಯುಷ್ಯದಲ್ಲಿ ಯಾದರೂ ಒಂದು ಪ್ರಕಾರದ ಸೌಂದರ್ಯವಿದೆ. ಇದೇನೋ ನಿಜ. ಆದರೆ, ಈ ಸೃಷ್ಟಿಸೌಂದರ್ಯದ ಉಪಯೋಗ ಆತನಿಗೆ ಏನು?'

ವಿದ್ಯಾಧರನು ಅರ್ಧಮರ್ಧ ಬಾಪ್ಪಾ ಅವರ ಕಡೆಗಿದ್ದನು. ಅವನು ಹೇಳಿದ್ದೇನಂದರೆ: 'ಗಾಂಧಿಯವರ ವಿಷಯದಲ್ಲಿ ಅವನು ಪ್ರಶ್ನೆ ಮಾಡಿದಾಗ ನನಗೆ ನಿಜವಾಗಿಯೂ ಆಶ್ಚರ್ಯವಾಯಿತು. ಆದರೆ ಆತನ ದೃಷ್ಟಿಯಲ್ಲಿ, ಗಾಂಧಿಯವರೂ ಒಬ್ಬ ಬುವಾನೂ ಒಂದೇ ಅಲ್ಲವೇ? ಜೀವನದಲ್ಲಿ ಇಂಥ ದೃಷ್ಟಿ ಇದ್ದರೆ ಜೀವನಕ್ಕಿಂತಲೂ ಕಲೆಯೇ ನನಗೆ ಒಳ್ಳೆಯದಾಗಿ ಕಾಣುತ್ತದೆ!'

ರಾತ್ರಿ ಊಟದ ವೇಳೆಯಲ್ಲಿ ಬಾಪ್ಪಾ ಅವರು ಸುಮ್ಮನಿದ್ದರು. ಊಟವಾದನಂತರ ಅವರು 'ನಿದ್ರೆ ಬಂದಿರುವದೋ ಎಲ್ಲರಿಗೂ?' ಎಂದು ಕೇಳಿದರು.

'ಇಲ್ಲ ಬಾಪ್ಪಾ ಅವರೇ. ಕಥೆ-ಗಿಥೆ ಹೇಳುವಿರಾ ಒಂದನ್ನು?' ಹೀಗೆನ್ನುತ್ತ ಸುಲೋಚನೆಯು ಅವರ ಹತ್ತಿರವೇ ಬಂದು ಕುಳಿತುಕೊಂಡಳು.

'ಚಿಕ್ಕಂದಿನಲ್ಲಿ ಹೀಗೆಯೆ ಹಟಮಾಡುತ್ತಿದ್ದಿ ನೀನು ಸುಲು' ಬಾಪ್ಪಾ ಅವರು ಅಂದರು.

'ಆ ರಾಜಾ ರಾಣಿಗಳ ಕಥೆ ಬೇಡ ನನಗೆ ಈಗ. ಯಾವಾಗಲೂ ಕಥೆ ಅಂದಕೂಡಲೇ, 'ಹಿಂಗ ಒಬ್ಬ ಅರಸಿದ್ದ. ಅವನಿಗೆ ಇದ್ದರು ಇಬ್ಬರು ರಾಣಿಯರು. ಒಬ್ಬಳ ಮೇಲೆ ಬಹಳ ಪ್ರೇಮ. ಮತ್ತೊಬ್ಬಳ ಮೇಲೆ ಪ್ರೀತಿಯಿರಲಿಲ್ಲವಂತೆ.' ಅಲ್ಲರೀ ಪ್ರೇಮ ಇಲ್ಲದೆ ಮಾಡಿಕೊಂಡನಾದರೂ ಹೇಗೆ ಲಗ್ನವನ್ನು ಅವನು? ಅಹುದಲ್ಲವೇ ರಮಾಕಾಂತ?'

ರಮಾಕಾಂತನೂ ಸುಮ್ಮನೆ ನಕ್ಕುಬಿಟ್ಟನು. ಆದರೆ ವತ್ಸಲೆಯ ನೆನಪಾಗಿ ಆತನಿಗೆ ಹೇಗೇಗೋ ಆಯಿತು.

ಬಾಪ್ಪಾ ಅವರು ಕಥೆ ಹೇಳುವದಕ್ಕೋಸ್ಕರ ಧೋತರವನ್ನು ಮೊಳ-ಕಾಲಿಗೆ ಸುತ್ತಿಕೊಂಡು ಕುಳಿತರು. ಚಳಿಯು ಸಲುವಾಗಿ ಅವರು ಒಂದು ಖಾದಿಯ ಬಗಲಬಂಡಿಯನ್ನು ಹಾಕಿದ್ದರು. ಉಳಿದವರೆಲ್ಲರೂ ಸ್ವೆಟರ ಮುಂತಾದವುಗಳನ್ನು ಹಾಕಿಕೊಂಡು ರಗ್ಗು ಹೊದ್ದುಕೊಂಡು ಕುಳಿತಿದ್ದರು. ಬಾಪ್ಪಾ ಅವರು ತನ್ನ ಕಡೆಗೆ ನೋಡಿ ಮಾತಾಡುವದನ್ನು ಕಂಡು ನೀರಾಗೆಗೆ ಹೇಗೋ ಅನಿಸಿತು.

'ಸಾಯಂಕಾಲದಲ್ಲಿ ನಮ್ಮ ವಾದವಿವಾದ ನಡೆದಿತ್ತಲ್ಲ....' ಬಾಪ್ಪಾ ಅವರು ಆರಂಭ ಮಾಡಿದರು.

'ನಮಗೆ ಆ ವಾದ ಬೇಕಾಗಿಲ್ಲ. ನಿಮ್ಮ ನೆನಹುಗಳನ್ನು ಹೇಳಿರಿ ನಮಗೆ'

'ಅವನ್ನೇ ಹೇಳುವವನಿದ್ದೇನೆ ನಿಮಗೆ. ಚಿತ್ರಕಾರ ಅಥವಾ ಹಾಡುಗಾರ ಜನರ ಗುರುತು ನನಗೆ ವಿಶೇಷವಾಗಿಲ್ಲ. ಆದರೂ ಮೊದಲಿನಿಂದ ನನಗೆ ಓದುವ ಹುಚ್ಚು ಬಹಳ ಅದೆ! ಸ್ವಲ್ಪ ಬಿಡುವು ಸಿಕ್ಕಕೂಡಲೆ ಯಾವದಾದರೊಂದು ಕಾವ್ಯವನ್ನು ಓದುತ್ತ ಕುಳಿತುಬಿಡುತ್ತೇನೆ! ಇದಲ್ಲದೆ ಒಮ್ಮೆ ಆರು ತಿಂಗಳು ಪ್ರೊಫೆಸರನೂ ಇದ್ದೆ! ತಿಳಿಯಿತೇ ರಮಾಕಾಂತ? ನನಗೆ ಕೇವಲ ಬಾಪ್ಪಾ ಅನ್ನಕೂಡದು. ಪ್ರೊ. ಬಾಪ್ಪಾ ನಾನು!'

ಶ್ರೋತೃವರ್ಗದ ಮೇಲೆ ನಗೆಯ ತೆರೆ ಬಂದು ಹೋದವು.

'ಮೂರು ದೊಡ್ಡ ಲೇಖಕರ ಅನುಭವ ಅದೆ ನನಗೆ. ಹೆಸರು ನಿಮ್ಮ ಲಕ್ಷ್ಯದಲ್ಲಿ ಬರಬಹುದು. ಮೊದಲನೆಯವನು ಸ್ತ್ರೀಸ್ವಾತಂತ್ರ್ಯದ ಸಲುವಾಗಿ ಇಷ್ಟು ಕಥೆಗಳನ್ನು ಬರೆದಿರುವನಲ್ಲ, ಅದೇನು ಹೇಳುವದು ಸುಲಭವಿಲ್ಲ. ಪ್ರತಿಯೊಂದು ಕಥೆಯಲ್ಲಿಯೂ ಗಂಡನು ಕೆಟ್ಟ, ಸ್ತ್ರೀಯು ಉತ್ತಮ. ಪ್ರತಿಯೊಬ್ಬ ಸ್ತ್ರೀಗೂ ಉಪದೇಶವೆಂದರೆ, 'ಲಗ್ನ ಮಾಡಿಕೊಳ್ಳಬೇಡಿರಿ, ಗುಲಾಮರಾಗಿರಬೇಡಿರಿ. 'ಸೌಭಾಗ್ಯವತಿ' ಶಬ್ದವನ್ನು 'ವೇಶ್ಯೆ' ಶಬ್ದದಂತೆ ಮನ್ನಿಸಿರಿ.' ಎಲ್ಲ ಬರೆಹಗಳಲ್ಲಿ ಬಂದೇ ಮಂತ್ರ—ಪುರುಷಜಾತಿಯೆಂದರೆ, ವಿಶ್ವಾಸಘಾತಕವಾದದ್ದು.'

'ಬಾಪ್ಪಾ ಅವರೇ, ಆಂಬೋಲಿಯಲ್ಲಿ ತಮ್ಮದೇನೂ ವಾಙ್ಮಯದ ಮೇಲೆ ವ್ಯಾಖ್ಯಾನವಲ್ಲ.' ಸುಲೋಚನೆಯು ನಡುವೆಯೆ ಅಂದಳು.

'ಚೆನ್ನಾಗಿ ಬ್ರೆಕ್ ಹಾಕಿದೆ, ಹೀಗೆ ಸ್ತ್ರೀಯರ ಕಡೆಯಿಂದ ಪುಕ್ಕಟೆ ವಕೀಲ ಪತ್ರ ತಕ್ಕೊಂಡ ಈ ಮಹಾತ್ಮನು ತನ್ನ ಹೆಂಡತಿಯನ್ನೇ ಹೇಗೆ ನಡೆಸಿಕೊಂಡಿರಬೇಕು? ನೀವು ಅನ್ನಬಹುದು ಹೂವುಗಳಿಂದ ಪೂಜೆ ಮಾಡಿರಲಿಕ್ಕೆಬೇಕು!' ಪೂಜೆಯನ್ನೆನೋ ಮಾಡಿದ ಪುಣ್ಯಾತ್ಮ! ಆದರೆ

ಆದರಲ್ಲಿ ಚಮತ್ಕಾರವಿಷ್ಟೇ, ಅವನು ಕೈಹಚ್ಚಿದ ಕೂಡಲೆ ಆತನ ಹೂವು ಗಳೆಲ್ಲವು ಬಡಿಗೆಗಳಾಗುತ್ತಿದ್ದವು. ಇಡೀ ರತ್ನಾಗಿರೀ ಜನರನ್ನೇ ಕೇಳಿರಿ ಬೇಕಾದರೆ. ಅದೊಂದು ಮೋಜಿನ ಪ್ರಸಂಗವೇ ಆಗಿತ್ತು. 'ಆ ಹರಾಮ ಖೋರ' ಪುರುಷನು ತನ್ನ ಹೆಂಡತಿಯನ್ನು ಒಂದು ಕೋಣೆಯಲ್ಲಿ ಹಾಕಿ, ಹೊರಗಿನಿಂದ ಒಂದು ದೊಡ್ಡದಾದ ಕೀಲಿ ಹಾಕಿ ಬಿಟ್ಟಿದ್ದ. ಇನ್ನು ಮತ್ತೊಬ್ಬ ಕಲಾವಂತನ ಕಥೆ, ಹೇಳುವೆ! ಸೆರೆಯ ಮೇಲಿನ ಆತನ ಕಾದಂಬರಿಯಂತೂ ಪ್ರಸಿದ್ಧವೇ ಆದೆ. ತನ್ನ ಮೇಜಿನ ಮೇಲೆ ಬಾಟಲಿ ಯನ್ನು ಇಟ್ಟುಕೊಂಡೇ ಅವನು ಪ್ರತಿಯೊಂದು ಪ್ರಕರಣವನ್ನು ಬರೆ ಯುತ್ತಿದ್ದ. ನನ್ನಂಥ ಮಿತ್ರರು ಯಾರಾದರೂ ಕೇಳಿದರೆ 'ಕಾದಂಬರಿಯು ಮುಗಿದನಂತರ ಸೆರೆ ಬಿಡುವೆನೆಂದು ಹೇಳುತ್ತಿದ್ದ! ಕಾದಂಬರಿಯ ಆವೃ ತ್ತಿಯ ಮೇಲೆ ಆವೃತ್ತಿಗಳಾದವು. ಅವನ ಮನೆಯಲ್ಲಿಯೂ ಸೆರೆಯ ಬಾಟ್ಲಿಯ ಮೇಲೆ ಬಾಟ್ಲಿಗಳು ಉರುಳಾಡಿದವು. ಕಡೆಗೆ ಸೆರೆಯು ತೀರಿತು. ಆದರೆ ಅದು ಅವನೊಡನೆಯೇ!'

ರಾತ್ರಿಯ ಆ ಪ್ರಶಾಂತವಾತಾವರಣದಲ್ಲಿ ಬಾಪ್ಪಾ ಅವರ ಆ ಶಬ್ದಗಳು ವಿಲಕ್ಷಣ ಗಂಭೀರವಾಗಿ ಅನಿಸುತ್ತಿದ್ದವು. 'ಇನ್ನುಮೇಲೆ ಮೂರನೇ ಗೃಹಸ್ಥ—ಪ್ರೇಮದ ದೊಡ್ಡ ಕವಿ. ನಡುವೆಯೆ ಆತನ ಹೆಂಡತಿ ಬೇನೆಬಿದ್ದಳು. ಡಾಕ್ಟರನು ಏನೋ ಹೇಳಿದ ಆತನ ಕಿವಿಯಲ್ಲಿ. ಕೂಡಲೆ ಹೊರಟಿತು ಆ ಸವಾರಿ ಒಬ್ಬ ವೇಶ್ಯೆಯ ಮನೆಯ ಕಡೆಗೆ. ಆ ವೇಶ್ಯೆಯು ನಮ್ಮ ಊರವಳೇ ಎಂದು ನನಗೆ ತಿಳಿಯಿತು ಈ ಸಮಾಚಾರ. ಆವಳು ನನಗೆ ಮೇಲಿಂದಮೇಲೆ ಕೇಳುವಳು 'ನೋಡಬೇಕಾಗಿದೆಯೋ ನಿಮಗೆ ನನ್ನ ಸರ್ಕಸ ಹೇಗಿದೆ ಎಂಬುದನ್ನು?'

'ಅವಳ ಮನೆಯ ಹೊಸ್ತಿಲವನ್ನು ಎಷ್ಟು ಜನ ಲೇಖಕರು, ಗಾಯಕರು, ನಟರು ದಾಟಿದ್ದರೆಂಬುದನ್ನು—'

ಬಾಪ್ಪಾ ಅವರು ತನ್ನನುದ್ದೇಶಿಸಿ ಮಾತಾಡುತ್ತಾರೆಂದು ರಮಾ ಕಾಂತನ ತಿಳುವಳಿಕೆಯಾಯಿತು. ಅವನು ಸಿಳ್ಳು ಹಾಕುತ್ತ ಹೊರಗಡೆಗೆ ಹೋಗಿ ನಿಂತುಕೊಂಡ. ಇದು ಸುಲೋಚನೆಯ ಲಕ್ಷ್ಯದಲ್ಲಿ ಬಂದಿತು.

ಸುರಂಗೆಯು ಮಾತ್ರ ಒಂದು ಮಂತ್ರಮುಗ್ಧವಾದ ನಾಗರ ಹಾವಿನಂತೆ ಸ್ತಬ್ಧವಾಗಿ ಕುಳಿತುಕೊಂಡಿದ್ದಳು. ಅವಳಿಗೆ ಅನಿಸುತ್ತಿತ್ತು 'ಬಾಪ್ಪಾ ಅವರು ತನ್ನಿಂದ ನಾಲ್ಕು ಮೊಳದ ಅಂತರದಮೇಲೆ ಕುಳಿತಿದ್ದರು. ಆದರೆ ನಿಜವಾಗಿ ಅವರಿಗೂ ತನಗೂ ಭೂಮ್ಯಾಕಾಶದಷ್ಟು ಅಂತರವಿರಲಿಲ್ಲವೆ? ಪ್ರೊಫೆಸರನ ನವಕರಿಯನ್ನು ಬಿಟ್ಟುಕೊಟ್ಟು, ಲಗ್ನ ಮಾಡಿಕೊಳ್ಳದೆ, ಪಂಜೆಯನ್ನು ಉಟ್ಟುಕೊಂಡು ಇರುವ ಈ ಬುದ್ಧಿವಂತ ಮನುಷ್ಯನೆತ್ತ! ರಮಾಕಾಂತನಂಥ ರಸಿಕ ತರುಣ ಜೊತೆಯಲ್ಲಿ ಆಯುಷ್ಯವನ್ನು ಕಳೆಯ ಲೆಳಸುವ ತಾನೆತ್ತ! ಬಾಪ್ಪಾ ಅವರ ಮತ್ತು ತನ್ನ ವೇಷ-ಭಾಷೆಗಳ ತುಲನೆ ಮಾಡಿದಕೂಡಲೇ ಅವಳಿಗೆ ನಾಚಿಕೆಯಾಗಿ ಅವಳು ಎರಡನೆ ಕಡೆಗೆ ನೋಡಹತ್ತಿದಳು. ರಮಾಕಾಂತನು ಹೊರಗೆ ಹೋದ ಕಾರಣವು ಸುರಂಗೆಗೂ ತಿಳಿದಿರಬಹುದೆಂದು ಸುಲೋಚನೆಯೂ ಕಡೆಗೆ ಅಂದಳು 'ಈ ಕಥೆಯ ಸಾರಾಂಶವೇನು ಬಾಪ್ಪಾ? ಕಲೆಯನ್ನು ಗಲ್ಲಿಗೇರಿಸಬೇಕೆಂದಲ್ಲವೆ?'

'ಅಲ್ಲ—'

'ಹಾಗಾದರೆ?'

'ಜೀವನವೆಂದರೆ ಒಂದು ತೆಗ್ಗುತೆವರಿನ ಹುರುಕಬರಕಾದ ಕರ್ರಗಿನ ಎರೆ ಭೂಮಿ. ಆದರೆ ಅದರೊಳಗಿಂದಲೆ ಧಾನ್ಯ ಬೆಳೆಯುವದು. ಕಲೆಯು ಆಕಾಶದಂತೆ! ಆಕಾಶದಲ್ಲಿ ನಕ್ಷತ್ರಗಳು ಮಿನುಗಿದರೆ, ಫಲಗಳು ಬೆಳೆಯುವದು ಭೂಮಿಯಲ್ಲಿಯೇ!'

'ಆದರೆ ಬೆಳೆಯಿಸುವವರು ಯಾರು? ಆಕಾಶದೊಳಗಿಂದ ಮಳೆಯು ಬಿದ್ದರೇನೆ ಅಲ್ಲವೆ ಬೆಳೆಯುವದು?' ಸುಲೋಚನೆ ಕೇಳಿದಳು.

'ಆಕಾಶದೊಳಗಾದರೂ ಮಳೆಯು ಹೋಗುವದೆಲ್ಲಿಂದ, ಭೂಮಿಯಿಂದಲ್ಲವೆ?'

ಬಾಗಿಲ ಹೊರಗೆ ನಿಂತಿದ್ದರೂ ರಮಾಕಾಂತನಿಗೆ ಅನಿಸಿತು–ಬಾಪ್ಪಾ ಅವರು ಆಯುಷ್ಯದಲ್ಲಿ ಒಳ್ಳೇ ದಿಕ್ಕು ತಪ್ಪಿದರು. ಅವರು ದೊಡ್ಡ ಕವಿಗಳಾಗಬಹುದಾಗಿತ್ತು!

